(ಮರಣ-ಕರ)

# ಆಸ್ತಿ-ಕರ ಕಾಯದೆಯ ರೂಪರೇಷೆ

## (OUTLINE OF ESTATE DUTY ACT)

ಶ್ರೀ ವ್ಹಿ. ಡಿ. ಕುಲಕರ್ಣಿ, ಬಿ. ಎ ಬಿ ಕಾಂ.
ಎಫ್. ಎಸ್. ಎ. ಎ.





ಪ್ರಕಾಶಕರು:-
ಹೊಂಬಾಳಿ ಬಂಧುಗಳು, ಹುಬ್ಬಳ್ಳಿ.

ಬೆಲೆ- ] ೧೯೫೪ [ ೧ ರೂ.

# ಮುನ್ನುಡಿ

ಶ್ರೀ ಕುಲಕರ್ಣಿಯವರು ಬರೆದ "ಆಸ್ತಿಕ ಕಾಯದೆಯ ರೂಪರೇಷೆಗಳು" ಎಂಬ ಈ ಚಿಕ್ಕ ಪುಸ್ತಕಕ್ಕೆ ಮುನ್ನುಡಿಯೆಂದು ನಾಲ್ಕು ವಾಕ್ಯಗಳನ್ನು ಬರೆಯಲು ನನಗೆ ತುಂಬಾ ಸಂತೋಷವಾಗುತ್ತದೆ.

ಆಸ್ತಿ ಕರವು ( Estate Duty ) ಭಾರತದ ಸಾರ್ವಜನಿಕ ಹಣಕಾಸಿನ (Public Finance ) ಇತಿಹಾಸದಲ್ಲೇ ಒಂದು ಮಹತ್ವದ ಹೆಜ್ಜೆಯೆಂದು ಹೇಳಬಹುದು. "ಅತಿ ಕಡಿಮೆ ಭಾರವಾದ ಕರವೇ ಅತ್ಯುತ್ತಮ ಕರವು ಅತಿ ಕಡಿಮೆ ಆಡಳಿತೆ ಮಾಡುವ ಸರಕಾರವೇ ಅತ್ಯುತ್ತಮ ಸರಕಾರವು" ಎಂದು ಹೇಳುವ ಕಾಲವೊಂದು ಇತ್ತು. ಆಧುನಿಕ ಸರಕಾರಗಳು ಬರಿ ಶಾಂತಿ ವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗುವ ಪೋಲೀಸ ರಾಜ್ಯಗಳಾಗಿರದೆ, ಜನರ ಕಲ್ಯಾಣಕ್ಕಾಗಿ ಪ್ರಯತ್ನಿಸುವ ಕ್ಷೇಮರಾಜ್ಯಗಳಾಗಿವೆ ( Welfare States ) ಯೆಂಬದನ್ನು ನಾವೆಲ್ಲರೂ ಅರಿತಿದ್ದೇವೆ. ಹೀಗಾಗಿ ಅರ್ಥಶಾಸ್ತ್ರದ ತತ್ವಗಳಲ್ಲೂ ತತ್ಸಮ ಬದಲಾವಣೆಯಾಗಿದೆ. ಸಾರ್ವಜನಿಕ ಹಣಕಾಸು ಬರಿ ಸರಕಾರದ ವೆಚ್ಚಕ್ಕಾಗಿ ಹಣಶೇಖರಿಸುವ ಕೈವಾಡವಾಗಿ ಉಳಿಯಲಿಲ್ಲ ಈಗಂತೂ, ಅದು ದೇಶದ ಅರ್ಥ ವ್ಯವಸ್ಥೆಯ ಚುಕ್ಕಾಣಿಯೆಂದೇ ಬಗೆಯಲ್ಪಡುತ್ತದೆ.

ಹೀಗಾಗಿ ಸರಕಾರದ ಕರ, ತೆರಿಗೆ ವೆಚ್ಚಗಳ ಉದ್ದೇಶಗಳೂ ಬದಲಾದವು. ರಾಜಕೀಯ ಸಮತೆಯು ಪರಿಪೂರ್ಣವಾಗಬೇಕಾದರೆ, ಕೆಲ ಮಟ್ಟಿದ ಆರ್ಥಿಕ ಸಮತೆಯೂ ಅವಶ್ಯವೆಂಬದನ್ನು ಮನಗಂಡು ಆಧು ಪ್ರಜಾರಾಜ್ಯಗಳು, ದೇಶದಲ್ಲಿಯ ಆರ್ಥಿಕ ವಿಷಮತಗಳನ್ನು ಆದಷ್ಟು ಕಡಿಮೆ ಮಾಡುವಂತೆ, ತಮ್ಮ ಹಣಕಾಸಿನ ಧೋರಣೆಗಳನ್ನು ನಿರೂಪಿಸಹತ್ತಿದ್ದವು. ಈ ಆರ್ಥಿಕ ವಿಷಮತೆಗಳನ್ನು

ಎರಡು ವಿಧವಾಗಿ ವಿಂಗಡಿಸಬಹುದು. ಒಂದು-ಆದಾಯದಲ್ಲಿಯ ವಿಷಮತೆ, ಎರಡು-ಆಸ್ತಿಯಲ್ಲಿಯ ವಿಷಮತೆ. ಆದಾಯಗಳಲ್ಲಿಂ ವಿಷಮತೆಯನ್ನು ಕಡಿಮೆ ಮಾಡಲು, ಸರಕಾರಗಳು, ಪ್ರಗತಿಪರ ಆದಾಯ ಕರವನ್ನು ( Progressive Income-Tax ) ಹೇರಿದ್ದನ್ನು ನಾವು ಕಾಣುತ್ತೇವೆ. ಆಸ್ತಿಕರವು ಎರಡನೆಯ ವಿಧದ ವಿಷಮತೆಯನ್ನು ಕಡಿಮೆ ಮಾಡಲು ಹೇರಿದ ಕರವು.

ಇಂಥ ಮಹತ್ವದ ಕರದ ರೂಪರೇಷೆಗಳಾದರೂ ಸಾಮಾನ್ಯ ಓದುಗರಿಗೆ ಪರಿಚಿತವಿರಬೇಕಾದದ್ದು ಆವಶ್ಯವೆಂಬ ದನ್ನು ಬೇರೆ ಹೇಳಬೇಕಾಗಿಲ್ಲ ಈ ದೃಷ್ಟಿಯಿಂದ ಕನ್ನಡದಲ್ಲಿ ಬರೆದ ಶ್ರೀ ಕುಲ ಕರ್ಣಿಯವರ ಪುಸ್ತಕವು ಸ್ವಾಗತಾರ್ಹವಾಗಿದೆ.

ಇದು ಲೇಖಕರ ಮೊದಲ ಪುಸ್ತಕವು. ಮೇಲಾಗಿ ಅರ್ಥಶಾ ಸ್ತ್ರದ ಪಾರಿಭಾಷಿಕ ಪದಗಳು ಕನ್ನಡದಲ್ಲಿ ಹೆಚ್ಚಾಗಿ ಬೆಳೆದು ಬಂದಿಲ್ಲ. ಆದ್ದರಿಂದ ಪುಸ್ತಕದಲ್ಲಿ ಕೆಲ ಕುಂದು ಕೊರತೆಗಳಿದ್ದರೆ, ಅದು ಒಂದು ದೃಷ್ಟಿಯಿಂದ ಅನಿವಾರ್ಯವೇ, ಎನ್ನಬಹುದು. ತರುಣ ಲೇಖಕರಾದ ಶ್ರೀ ಕುಲಕರ್ಣಿಯವರು, ತಮ್ಮ ಮುಂದಿನ ಕೃತಿಗಳಲ್ಲಿ, ಶೈಲಿ, ವಸ್ತುವಿನ ನಿರ್ದೇಶನ ಪದ್ಧತಿ, ಹಾಗೂ ಬಳಿಸಲಾದ ಕನ್ನಡ ಶಬ್ದಗಳು— ಇವೆಲ್ಲವುಗಳನ್ನು ಇನ್ನೂ ಹೆಚ್ಚು ಚೆನ್ನಾಗಿ ಪ್ರದರ್ಶಿ ಸುವರೆಂದು ಆಶಿಸುವೆ.

ಆಸ್ತಿಕರದ ಬಗ್ಗೆ ಕನ್ನಡಿಗರಿಗೆ ಪ್ರಸ್ತುತ ಪುಸ್ತಕವನ್ನು ಒದ ಗಿಸಿ, ಲೇಖಕರು ಅಭಿನಂದನೆಗೆ ಪಾತ್ರರಾಗಿದ್ದಾರೆ. ಈ ಪುಸ್ತಕವು ಓದುಗರ ಮೆಚ್ಚುಗೆಗೆ ಪಾತ್ರವಾಗುವದೆಂದು ನಂಬುತ್ತೇನೆ.

ಮಲಬಾರಹಿಲ್,

**ಮುಂಬಯಿ** **ರಾ. ಶ್ರೀ. ಹುಕ್ಕೇರಿಕರ**

೩ಲನೆಯ ಜುಲೈ ೧೯೫೪

# ಅರಿಕೆ

ಅರ್ಥಶಾಸ್ತ್ರವು ದಿನೇ ದಿನೇ ಹೊಸರೂಪ ತಾಳುತ್ತ ನಡೆದಿದೆ. ಆರ್ಥಿಕ ತತ್ವ ಪ್ರಣಾಲಿಯಲ್ಲಿ ನೂತನ ಸಿದ್ಧಾಂತಗಳು ರೂಪತಾಳುತ್ತ ನಡೆದಂತೆ,ಪ್ರಪಂಚದ ಆರ್ಥಿಕ ದೃಷ್ಟಿಕೋನವು ಬದಲಾಗುತ್ತ ನಾಗಿದೆ. ಪ್ರಜಾಪ್ರಭುತ್ವ, ಒಂದು ಆರ್ಥಿಕ ರಚನೆಯ ಮೂಲಬೇರಾದರೆ, ಭಂಡವಳಶಾಹಿತ್ವ ಇನ್ನೊಂದು ಆರ್ಥಿಕ ಪರಂಪರೆಯಾಗಿದೆ ಭಂಡವಳಶಾಹಿತ್ವವನ್ನು ಸಂಪೂರ್ಣವಾಗಿ ನಿರ್ನಾಮ ಮಾಡಿ, ಸಂಪತ್ತು ಸರ್ವರಲ್ಲಿ ಸಮನಾಗಿ ಹಂಚಲ್ಪಡಬೇಕೆಂಬ ವಾದ ಇದೀಗಮರೆಯಾಗುತ್ತಿದ್ದು ಕ್ರಮಶಃ ಬಂಡವಲಶಾಹಿತ್ವವನ್ನು ನಿರ್ಮೂಲನ ಮಾಡಿ, ಪ್ರಜಾಪ್ರಭುತ್ವವನ್ನು ಸ್ಥಾಪಿಸಬೇಕೆಂಬ ಸಿದ್ಧಾಂತವನ್ನು ಇಂದು ಪ್ರಪಂಚ ಒಪ್ಪಿಕೊಂಡಿದೆ. ಈ ಸಂಪತ್ತಿನ ಅಸಮಾನತೆಯನ್ನು ಕ್ರಮಶಃ ನಿರ್ಮೂಲನ ಮಾಡುವ ದಾರಿಯಲ್ಲಿ, ಆಸ್ತಿಕರವು ತನ್ನದೇ ಆದ ವೈಶಿಷ್ಟ್ಯವನ್ನು ಕಾಯ್ದುಕೊಂಡಿದ್ದರಿಂದ, ಆಸ್ತಿಕರ ಕಾನೂನಿಗೆ ಆರ್ಥಿಕ ಮಹತ್ವವು ಪ್ರಾಪ್ತವಾಗಿದೆ.

ಈ ರೀತಿಯಾಗಿ ಆಸ್ತಿಕರವು ಕಾಯದೆಯ ರಂಗದಲ್ಲಿಯೂ, ಆರ್ಥಿಕ ರಂಗದಲ್ಲಿಯೂ ಮಹತ್ವದ ಪಾತ್ರವನ್ನು ನಿರ್ವಹಿಸುವದರಿಂದ ಅದರ ವಿವರಗಳನ್ನು ಸಾಮಾನ್ಯ ಜನತೆ ಅರಿಯಬೇಕಾಗಿದೆ ಕಾಯದೆಯ ಅಜ್ಞಾನದ ನೆಪವನ್ನು ಮುಂದೆಮಾಡಿ, ಕಾಯದೆಯು ಪಸರಿಸಿದ ಜಾಲದಿಂದ ಯಾವ ವ್ಯಕ್ತಿಯೂ ಪಾರಾಗಿ ಹೋಗಲಾರನು. ಪ್ರತಿಯೋರ್ವನಿಗೂ, ಅವನು ಅಜ್ಞನಿರಲಿ, ನಿರಕ್ಷರಸ್ಥನಿರಲಿ, ಕಾನೂನಿನಲ್ಲಿ ಮಂಡಿಸಿದ ಅಂಶಗಳು ಅವನಿಗೆ ಅನ್ವಯಿಸುವವು. ಆದ್ದರಿಂದ ಜನಸಾಮಾನ್ಯರಿಗೂ ತಿಳಿಯುವಂತೆ, ಗಡುಚಾದ ಈ ಕಾಯದೆಯನ್ನು ಸುಲಭವಾದ ಭಾಷೆಯಲ್ಲಿ ವಿವರಿಸಲು ಇಲ್ಲಿ ಯತ್ನಿಸಲಾಗಿದೆ. ಅವಶ್ಯ

ವಿದ್ದಲ್ಲಿ ಉದಾಹರಣೆಗಳು, ಕೋರ್ಟ ಪ್ರಕರಣಗಳು, ನಕ್ಷೆಗಳು ಮೊದ ಲಾದವುಗಳನ್ನು ಉಪಯೋಗಿಸಿ, ಶಕ್ಯವಿದ್ದಷ್ಟು ಸುಲಭವಾಗಿ ಮಂಡಿ ಸಲು ಪ್ರಯತ್ನಿಸಿದ್ದೇನೆ.

ಇದು ಕಾಯದೆಯ ಭಾಷಾಂತರವಲ್ಲ. ಅಥವಾ ಆ ಕಾಯದೆಯ ಗೈಡೂ ಅಲ್ಲ. ಹತ್ತು-ಹದಿನೈದು ಪುಸ್ತಕಗಳ ಅಭ್ಯಾಸ ಮಾಡಿ, ಕನ್ನಡ ದಲ್ಲಿ ಸಂಗ್ರಹಿಸಿದ ಸ್ಥೂಲ ವಿವರಗಳು ಮಾತ್ರ. ಕಾಯದೆಯ ಎಲ್ಲಾ ಕಲಮುಗಳೂ ಇಲ್ಲಿ ಅಡಕವಾಗಿವೆಯೆಂದು ಎದೆತಟ್ಟಿ ಹೇಳುವದಿಲ್ಲವಾ ದರೂ, ಇದು ಮಹತ್ವದ ಕಲಮುಗಳ ಸೋದಾಹರಣ ಸ್ಪಷ್ಟೀಕರಣ ವೆಂದು ಖಂಡಿತವಾಗಿಯೂ ಹೇಳಬಲ್ಲೆ ಇದು ಕಾನೂನಿನ ಸ್ಥೂಲ ಸ್ವರೂಪ ಮಾತ್ರ. ಇದು ಕನ್ನಡಿಗರಲ್ಲಿ ಜನಪ್ರಿಯವಾದರೆ, ಸಂಪೂರ್ಣ ವಿವರಗಳನ್ನು ವಿದೇಶಿ ಆಸ್ತಿಕರಗಳೊಡನೆ ತುಲನಾತ್ಮಕ ದೃಷ್ಟಿಯಿಂದ ಅಭ್ಯಸಿಸಿ, ಒಂದು ಆಧಾರಗ್ರಂಥವನ್ನು ಕನ್ನಡಿಗರಿಗೆ ಕೊಡುವ ವಿಚಾರವಿದೆ.

ವಿಜಾಪುರದ ಕನ್ನಡ ವಾರಪತ್ರಿಕೆ "ಕರ್ನಾಟಕ ವೈಭವ" ದಲ್ಲಿ "ಆಸ್ತಿಕರದ ಬಗೆಗೆ ಕೆಲವು ವಾಸ್ತವಾಂಶಗಳು" ಎಂಬ ಲೇಖನ ಮಾಲೆಯಲ್ಲಿ ಮೂರು ಲೇಖನಗಳನ್ನು ಬರೆದು ಮುಗಿಸುವಷ್ಟರಯೇ, ಅದೇ ವಿಷಯದಮೇಲೆ ಒಂದು ಚಿಕ್ಕ ಹೊತ್ತಿಗೆಯನ್ನು ಬರೆದುಕೊ ಡಲು ಪ್ರಕಾಶಕರು ಕೇಳಿಕೊಂಡಾಗ, ನಾನು ಸಂತೋಷದಿಂದ ಒಪ್ಪಿಕೊಂಡೆ ಈ ಲೇಖನ ಮಾಲೆಯನ್ನು ಬರೆಯಲು ನನಗೆ ಪ್ರಚೋ ದಿಸಿದ "ಕರ್ನಾಟಕ ವೈಭವದ"ದ ಶ್ರೀ ಶ್ರೀನಿವಾಸ ನಾಯಕರನ್ನು ಇಲ್ಲಿ ನೆನೆಸದೆ ಇರಲಾರೆ. ಇಂಗ್ಲೀಷ ಶಬ್ದಗಳಿಗೆ ಕನ್ನಡ ಅರ್ಥವನ್ನು ಕಟ್ಟುವಾಗ ಕೆಲವು ಪಂಡಿತರ ನೆರವನ್ನೂ ಪಡೆದಿದ್ದೇನೆ. ಈ ಸಂದ ರ್ಭದಲ್ಲಿ ಶ್ರೀ ಎಸ್. ಎಚ್. ರಿತ್ತಿ, ಪ್ರೊ. ದಿಕ್ಷಿತ, ಪ್ರೊ. ಸಿ. ಎಂ.

ಕುಲಕರ್ಣಿ, ಪ್ರೊ. ಕೆ. ಜಿ. ಪ್ಹಿ. ಕೃಷ್ಣಾ ಮೊದಲಾದವರಿಗೆ ನಾನು ಕತಜ್ಞನಾಗಿದ್ದೇನೆ.

ನಾನು ಮುನ್ನುಡಿ ಬರೆದುಕೊಡಿರೆಂದು ಕೇಳಿದಾಗ, ಸಂತೋಷದಿಂದ ಒಪ್ಪಿಕೊಂಡು, ಮುನ್ನುಡಿ ಬರೆದುಕೊಟ್ಟ ಮುಂಬಯಿ ಲೆಜಿಸ್ಲೇಟಿವ್ಹ ಕೌನ್ಸಿಲಿನ ಸಭಾಧ್ಯಕ್ಷ ಮಾನ್ಯ, ಶ್ರೀ ಆರ್. ಎಸ್. ಹುಕ್ಕೇರಿಕರರಿಗೆ ನಾನು ಉಪಕೃತನಾಗಿದ್ದೇನೆ. ನನ್ನಲ್ಲಿ ಅಡಕವಾಗಿದ್ದ ಯಾವದೋ ಗುಪ್ತ ಶಕ್ತಿಗೆ ಮಾನ್ಯ ಶ್ರೀ ಹುಕ್ಕೇರಿಕರರು ಚಾಲನೆ ಕೊಟ್ಟಿದ್ದಾರೆ. ಅವರ ಪ್ರೀತಿ ಹಾಗೂ ಆಶೀರ್ವಾದಗಳಿದ್ದರೆ, ಏನನ್ನೂ ಮಾಡಬಲ್ಲೆನೆಂಬ ಆತ್ಮಾಭಿಮಾನವಿದೆ.

ಪುಸ್ತಕ ಬರೆಯುತ್ತಿರುವಾಗ ನನ್ನನ್ನು ಹುರಿದುಂಬಿಸಿ, ಬರೆದ ಮೇಲೆ ತಮ್ಮ ಅಮೌಲ್ಯ ಅಭಿಪ್ರಾಯ ಕೊಟ್ಟು, ಕರ್ನಾಟಕ ವಣಿಕ್ ಸಂಘದ ಅಧ್ಯಕ್ಷರಾದ ಶ್ರೀ ಶಾಂತಪ್ಪಣ್ಣ ಯಳಮಲಿಯವರು, ನನ್ನ ಕಾರ್ಯದಲ್ಲಿ ಮೊದಲನಿಂದಲೂ ವಿಶ್ವಾಸತೋರಿಸುತ್ತ ಬಂದಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು ಹಿರಿಯರ ಬಲವೇ ದೈವಬಲ !

ಹಸ್ತ ಪ್ರತಿಯನ್ನು ಸಿದ್ಧಗೊಳಿಸುವಾಗ ನೆರವಾದ ಶ್ರೀ ಚಿದಂಬರ ಹೆಗಡೆ, ಶ್ರೀ ಪಿ ಎಸ್ ದೇಸಾಯಿ, ಮೊದಲಾದವರಿಗೂ ನಾನು ಉಪಕತೃನಾಗಿದ್ದೇನೆ ಪುಸ್ತಕ ಪ್ರಕಾಶಿಸುವ ಹೊಣೆಹೊತ್ತ ಗೆಳೆಯ ಶ್ರೀ ಹೊಂಬಾಳಿ ಯವರಿಗೆ ನಾನು ಕೃತಜ್ಞನಾಗಿದ್ದೇನೆ, ವಂದನೆಗಳು.

ಪೋದಾರ ಕಾಮರ್ಸ ಕಾಲೇಜ ಹಾಸ್ಟೆಲು
೧೩೫, ಸಾಯನ್ ಮುಂಬಯಿ

**ಪ್ಹಿ. ಡಿ. ಕುಲಕರ್ಣಿ**

೨೯ ನೆಯ ಜುಲೈ, ೧೯೫೪

# :: ಪರಿವಿಡಿ ::

# ಪ್ರಕರಣ ೧.

## ಪ್ರಸ್ತಾವನೆ



### ೧. ಆಸ್ತಿಕರದ ಆರ್ಥಿಕ ಹಿನ್ನೆಲೆ

ಪ್ರಕೃತಿಯು ಮಾನವನಿಗೆ ದುಡಿಯಲು ಶಕ್ತಿಯನ್ನೂ ಬುದ್ಧಿಯನ್ನೂ ದಯಪಾಲಿಸಿದ್ದರಿಂದ, ಮನುಷ್ಯನು ತನ್ನ ಜೀವಮಾನದಲ್ಲಿ ತನಗೆ ಸಾಧ್ಯವಿದ್ದಷ್ಟು ಆಸ್ತಿಯನ್ನು ಸಂಪಾದಿಸಬಹುದಾಗಿದೆ. ತನ್ನ ಜೀವನಾಂತ್ಯದವರೆಗೆ ಆಸ್ತಿಯನ್ನು ಉಪಭೋಗಿಸಲು, ಪ್ರಕೃತಿ ಮನುಷ್ಯನಿಗೆ ಅಧಿಕಾರ ಕೊಟ್ಟಿದೆಯೇ ವಿನಃ ತನ್ನ ಮರಣಾನಂತರ, ಆಸ್ತಿಯನ್ನು ಉಪಭೋಗಿಸುವ ಹಕ್ಕನ್ನು ನಿಸರ್ಗವು ನೀಡಿಲ್ಲ. ವ್ಯಕ್ತಿಯು ಮರಣದ ನಂತರ, ಆತನ ಸಂಬಂಧಿಕರು ಆಸ್ತಿಯು ಉಪಭೋಗಿಸಿಕೊಳ್ಳುವ ಹಕ್ಕನ್ನು, ಸರಕಾರವೇ ಕಾಯದೆಯ ಮುಖಾಂತರ ನೀಡಿದ್ದರಿಂದ, ಆ ಆಸ್ತಿಯ ಉಪಭೋಗದ ಬಗ್ಗೆ ನಿಶ್ಚಿತ ಕ್ರಮಗಳನ್ನು ಸೂಚಿಸಲು ಸರಕಾರವು ಕ್ರಮಬದ್ಧವಾಗಿದೆ.* ಇಂದು ನಾವೆಲ್ಲ ನಮ್ಮ ಆಸ್ತಿ

---

* "Nature gives a man no power of his earthly goods beyond the term of life. What power he possesses is to prolong his will after his death-the right of dead hand to dispose of his property is merely the creation of law and the State has right to prescribe the conditions and limitations under which that power shall be exercised." -ಸರ್. ವಿಲಿಯಮ್ ಹರ್‌ಕೌಂಟರು ಇಂಗ್ಲೀಷ ಆಸ್ತಿ ಕರ ಕಾನೂನಿನ ಬಗ್ಗೆ ಹೇಳಿದ ಮಾತುಗಳಿವು.

ಗಯಿಸೋಣ" ದರ ಹಕ್ಕನ್ನು ಚಲಾಯಿಸುತ್ತಿರುವದು ನಿಸರ್ಗ ನಿರ್ಮಿತವಾಗಿರದೆ, ರಾಷ್ಟ್ರೀಯರಿಗೆ ಸರಕಾರವು ನೀಡಿದ ಪರಂಪರಾಗತ ಹಕ್ಕಾಗಿದೆ ಮೃತನು ಗಳಿಸಿದ ಆಸ್ತಿಯನ್ನು ತಮ್ಮ ವಶದಲ್ಲಿ ತೆಗೆದು ಕೊಳ್ಳುವ ಮೊದಲು, ಈ ಹಕ್ಕನ್ನು ನೀಡಿದ ಸರಕಾರಕ್ಕೆ ಕೃತಜ್ಞರಾಗಿ, ಮೃತನು ಗಳಿಸಿದ ಆಸ್ತಿಯ ಮೇಲೆ ಕರವನ್ನು ಕೊಡುವದೇ "ಆಸ್ತಿ ಕರ" ವಾಗಿದೆ. ಯಾರೋ ಗಳಿಸಿಟ್ಟ ಆಸ್ತಿಗೆ, ಇನ್ನೊಬ್ಬರು ವಾರಸದಾರರಾಗಿ, ಆ ಆಸ್ತಿಯ ಉಪಭೋಗ ಮಾಡಿಕೊಳ್ಳುವ ವಿಷಯ ಪ್ರಕೃತಿಗೆ ಸೇರಿದ್ದಲ್ಲ. "ತಲೆ ತಲಾಂತರಗಳಿಂದ ಈ ಆಸ್ತಿ ಕೈಗಳಿಂದ ಕೈಗೆ ಸಾಗಿ ಬರುತ್ತಿದ್ದುದರ ಪರಿಣಾಮವಾಗಿ ನಮ್ಮಲ್ಲಿ ಕೆಲಸ ಮಾಡುವ ಪ್ರವೃತ್ತಿ ದಿನೇ ದಿನೇ ಕಡಿಮೆಯಾಗುತ್ತ ನಡೆದಿದೆ. ಇಂತಹ ಪ್ರವೃತ್ತಿಯನ್ನು ತಡೆಗಟ್ಟಲು ಆಸ್ತಿಕರವು ಮೊದಲನೆಯ ಮೆಟ್ಟಲಾಗಿದೆ" ಯೆಂದು ಧಾರಾಳವಾಗಿ ಹೇಳಬಹುದು.

ನಾವಿರಾರು ವರುಷಗಳಿಂದ ನಡೆದು ಬಂದ ನಮ್ಮ ಜೀವನದಲ್ಲಿ ಅನೇಕ ವಿಷಮ ಘಟನೆಗಳು ಸಂಭವಿಸಿ, ಮನುಷ್ಯರಾಗಿ ಹುಟ್ಟಿದವ ರೆಲ್ಲರೂ ಎಲ್ಲ ದೃಷ್ಟಿಯಿಂದಲೂ ಸಮಾನರಾಗಿರದೆ, ಮಾನವ ಮಾನವ ರಲ್ಲಿಯೇ ಬೇಧಭಾವಗಳು ಹುಟ್ಟಿಕೊಂಡಿವೆ ಸೃಷ್ಟಿಯ ದಬ್ಬಾಳಿಕೆಯ ಜೊತೆಯಲ್ಲಿಯೇ ಪರಂಪರಾಗತ ಕಾನೂನಿನ ಬೆಂಬಲವೂ ದೊರೆತು ಪ್ರಪಂಚದ ಜನಕೋಟಿ ಎರಡು ಗುಂಪುಗಳಾಗಿ ವಿಂಗಡಿಸಲ್ಪಟ್ಟಿದೆ. ಸಂಪತ್ತು ಮಾನವರಲ್ಲಿ ಸಮನಾಗಿ ಹಂಚಲ್ಪಡದೆ ಸುವ್ಯವಸ್ಥಿತ ಗೊತ್ತು-ಗುರಿಯಿಲ್ಲದೆ ವಿಂಗಡಿಸಲ್ಪಟ್ಟಿದೆ.* ಅಧಿಕ ಸಂಪತ್ತುಳ್ಳವರದು ಒಂದು ಪಂಗಡ, ತಿಲಮಾತ್ರವೂ ಸಂಪತ್ತಿಲ್ಲವರದು ಇನ್ನೊಂದು ಪಂಗಡ. ಈ ವಿಷಮ ಹಂಚಿಕೆಯ ಪರಿಣಾಮವಾಗಿ, ಮೊದಲನೆಯ

---

* Dalton.

" ಉಳ್ಳವರ ವರ್ಗ " ತಲೆತಲಾಂತರದಿಂದ ಸಿರಿವಂತಿಕೆಯ ವೈಭವವನ್ನು ಭೋಗಿಸುತ್ತ, ಜೀವನದ ಅಂತ್ಯದವರೆಗೂ ಆಗರ್ಭ ಶ್ರೀಮಂತಿಕೆಯಲ್ಲಿಯೇ ಮೆರೆಯುವರಾದರೆ, ಮುಂಜಾವಿನಿಂದ ಸಂಜೆಯವರೆಗೂ ದುಡಿದೂ ದುಡಿದೂ, ಕೊನೆಯವರೆಗೂ ಬಡತನದ ಬೇಗೆಯಲ್ಲಿಯೇ ಇನ್ನೊಂದು ವರ್ಗದ ಜನ ಮಡಿಯುತ್ತಾರೆ. ಈ " ವರ್ಗ ಕಲಹ " ಸಮಾಜ ಜೀವನದ ರೀತಿ-ನೀತಿಗಳಲ್ಲಿ ಬಹಿರಂಗವಾಗಿ ಕಾಣಿಸಿಕೊಂಡಿದ್ದರ ಪರಿಣಾಮವಾಗಿಯೇ "ಸರ್ವರಿಗೂ ಸಮ ಸಂಪತ್ತು ಇರಬೇಕು" ಎಂಬ ತತ್ವ ಸಿದ್ಧಾಂತವನ್ನು ಪ್ರಪಂಚವೂ ಅರಿತುಕೊಂಡಿದೆ. ಅಂತೆಯೇ ಅರ್ಥಶಾಸ್ತ್ರದ ಮೂಲ ಉದ್ದೇಶವಾಗಲೀ, ಆರ್ಥಿಕ ಚಟುವಟಿಕೆಗಳ ಅಂತಿಮ ಗುರಿಯಾಗಲೀ ಈ ಸಂಪತ್ತಿನ ಅಸಮಾನತೆಯನ್ನು ಹೋಗಲಾಡಿಸುವದೇ ಆಗಿದೆ.* ಈ ಸಂಪತ್ತಿನ ಅಸಮಾನತೆಯನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಕಡಿಮೆ ಮಾಡುವ ಸಾಧನಗಳಲ್ಲಿ ಆಸ್ತಿಕರವೂ ಒಂದಾಗಿದೆ. ಆದ್ದರಿಂದ ಸಮಸ್ತ ಜನಕೋಟಿಯ 'ಶಾಂತಿ ಹಾಗೂ ತೃಪ್ತಿ' ಇವೇ ಆಸ್ತಿಕರದ ಆರ್ಥಿಕ ಹಿನ್ನೆಲೆಯಾಗಿವೆ.

" ಆಸ್ತಿಕರ " ದ ಮೂಲ ಮೂರು ಉದ್ದೇಶಗಳನ್ನು ಹೀಗೆ ವಿವರಿಸಬಹುದಾಗಿದೆ.

೧. ಸಂಪತ್ತಿನ ಅಸಮಾನತೆಯನ್ನು ಹೋಗಲಾಡಿಸುವದು ಆಸ್ತಿಕರದ ಮೊದಲನೆಯ ಗುರಿಯಾಗಿದೆ.

೨. ಈ ಆರ್ಥಿಕ ವಿಷಮತೆಯನ್ನು ಹೋಗಲಾಡಿಸುವದರ ಜೊತೆಗೆ, ಜನತೆಯಲ್ಲಿ ಕೆಲಸವನ್ನು ಮಾಡುವ ಪ್ರವೃತ್ತಿಗೆ ಪ್ರಚೋದನೆ

* " The basic principle of economic study or the ultimate aim of economic activities is to reduce the existing inequalities of wealth. "

ನೀಡಿ ಪರಂಪರಾಗತ ಪಿತ್ರಾರ್ಜಿತ ಆಸ್ತಿಯು ಮೇಲೆಯೇ ಅವಲಂಬಿಸ
ದಂತೆ ನೋಡುವದು.

೩. ಎಲ್ಲ ಕರಗಳ ಅಂತಿಮ ಗುರಿಯಂತೆ, ಆಸ್ತಿಕರದ ಗುರಿ
ಯಾದರೂ, ಸಿರಿವಂತರಿಂದ ಶೇಖರಿಸಿದ ಕರವನ್ನು ದೇಶದ ಇತರ
ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಿ, ರಾಷ್ಟ್ರೀಯ ಅಭ್ಯುದಯ
ವನ್ನು ಸಾಧಿಸುವದು.*

## ೨. ವಿಶ್ವದ ಇನ್ನಿತರ ಭಾಗಗಳಲ್ಲಿ—

ಪ್ರಪಂಚದ ೪೦ ರಾಷ್ಟ್ರಗಳಲ್ಲಿ ಇಂದು ಆಸ್ತಿಕರವು ಒಂದಿ
ಲ್ಲೊಂದು ರೂಪದಿಂದ ಅಸ್ತಿತ್ವದಲ್ಲಿದೆ. ಇಂಗ್ಲಂಡಿನಂತಹ ಅತ್ಯಂತ
ಮುಂದುವರೆದ ರಾಷ್ಟ್ರಗಳೂ, ದಕ್ಷಿಣ ಆಫ್ರಿಕೆಯಂತಹ ಅತ್ಯಂತ
ಹಿಂದುಳಿದ ರಾಷ್ಟ್ರಗಳೂ ಕೂಡ ಆಸ್ತಿಕರವನ್ನು ವಸೂಲ ಮಾಡು
ತ್ತವೆ. ಇಂಗ್ಲಂಡದಲ್ಲಿ ಈ ಆಸ್ತಿಕರ ಕಾನೂನು ೧೮೯೪ ರಲ್ಲಿ ಅಸ್ತಿತ್ವ
ದಲ್ಲಿ ಬಂದಿದ್ದರೆ, ೧೯೧೯ ರಲ್ಲಿ ಸಿಲೋನದಲ್ಲಿಯೂ, ೧೯೪೮ ರಲ್ಲಿ ಪಾಕಿ
ಸ್ತಾನದಲ್ಲಿಯೂ ಆಸ್ತಿಕರವು ಜಾರಿಯಲ್ಲಿ ಬಂದಿದೆ. ಇಂಗ್ಲಂಡದಲ್ಲಿ
ಆಸ್ತಿಕರವು, ಮರಣ ಕರಗಳ ರೂಪದಲ್ಲಿ ೧೬೯೪ರಿಂದಲೇ ವಿವಿಧ
ರೂಪಗಳಿಂದ ಪ್ರಚಲಿತವಿತ್ತು.† ೧೬೯೪ರಲ್ಲಿ ೫ ಶಿಲಿಂಗಿನ ನಿಶ್ಚಿತ
ದರದಂತೆ " ಸ್ಟ್ಯಾಂಪ ಕರ "ದ ರೂಪದಿಂದ ತೆಗೆದುಕೊಳ್ಳಲಾಗುತ್ತಿತ್ತು.

---

* Dalton.

† "This, the earliest of the English death duties, originated in 1694 in the form of stamp duty at the fixed rate of 5s. payable on taking out probate or letters of administration of a deceased estate "

–C. N. Bealtie.

ಮುಂದೆ ಆ ದರವನ್ನು ೧೦ ಶಿಲಿಂಗಿನವರೆಗೆ ಏರಿಸಿ, ೧೭೯೯ರಲ್ಲಿ "ಸ್ಟಾಂಪ ಕರ" ಕ್ಕೆ ಒಂದು ನಿಶ್ಚಿತ ಸ್ವರೂಪವನ್ನು ಕೊಡಲಾಯಿತು. ಅದು ಅಲ್ಲದೆ 'ಅಕೌಂಟ ಡ್ಯೂಟಿ,' ಟೆಂಪರರಿ ಎಸ್ಟೇಟ ವ್ಯಾಟ ಮೊದಲಾದ ಅನೇಕ ಚಿಕ್ಕಪುಟ್ಟ ಕರಗಳೂ ೧೭೯೯ ರಿಂದ ೧೮೯೪ ರ ವರೆಗೆ ಪ್ರಚಲಿತವಿದ್ದವು.

ಕಳೆದ ಒಂದು ಶತಮಾನದಿಂದಲೂ, ಅರ್ಥಶಾಸ್ತ್ರದ ಪ್ರಣಾಲಿಕೆಯಲ್ಲಿ ಮಹತ್ವದ ಬದಲಾವಣೆಗಳು ಸಂಭವಿಸಿದರ ಪರಿಣಾಮವಾಗಿಯೋ, ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಿಂದ ಹಿಡಿದು ಇಪ್ಪತ್ತನೆಯ ಶತಮಾನದ ಉತ್ತರಾರ್ಧದ ವರೆಗೂ ಈ ಆರ್ಥಿಕ ತತ್ವ ಪ್ರಣಾಲಿಕೆಯನ್ನು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ರಾಷ್ಟ್ರಗಳು ಒಪ್ಪಿಕೊಳ್ಳುತ್ತ ಬಂದಿವೆ.* ಆಸ್ತಿಕರ ಕಾನೂನಿನ ಇತಿಹಾಸವೆಂದರೆ

* "Why should you not say plainly and frankly this is first and frontline attack on capital and private enterprise. We want to destroy capital because those who have control over capital in the ultimate analysis have control over Government. Equality of opportunity and social justice will be secured through this measure. The title to private property is not because the owner asserts but because of the social and legal recognition given to it. In the creation of private property or accumulation of private capital, the state is silent partner and is entitled to claim its share when the partnership is dissolved by death"

—Sri N. V. Gadgil.

ಕೇವಲ ಕರಾಕರಣೆಗಳಲ್ಲಿ ನಡೆದು ಬಂದ ಸ್ಥಿತ್ಯಂತರಗಳ ಐತಿಹಾಸಿಕ ವಿಹಂಗಮ ನೋಟವಾಗಿರದೆ, ಅರ್ಥಶಾಸ್ತ್ರದಲ್ಲಿ ನಡೆದು ಬರುತ್ತಿರುವ ಅನೇಕ ಸ್ಥಿತ್ಯಂತರಗಳ ಹಿನ್ನೆಲೆಯಾಗಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಭಂಡವಾಳಶಾಹಿತ್ವ ( Capitalism ) ದಿನೇ ದಿನೇ ಹೊಸ ರೂಪ ತಾಳುತ್ತ ನಡೆದಂತೆ, ಆಸ್ತಿಕರದ ಬಗೆಗೆ ಹೊಸ ಹೊಸ ನಿರೂಪಣೆಗಳು ಪ್ರಚಲಿತವಾಗುತ್ತ ನಡೆದವು.

## ೩. "ಭಾರತ" ಮತ್ತು "ಆಸ್ತಿಕರ"

ಆಸ್ತಿಕರ ಮಸೂದೆಯನ್ನು ಪಾಸುಮಾಡಿ, ಹಿಂದುಸ್ತಾನದಲ್ಲಿ ಅಮಲು ಬಜಾವಣೆ ಮಾಡುವ ಪ್ರಯತ್ನಗಳು ೧೯೨೪ ರಿಂದಲೂ ನಡೆದುಬಂದಿವೆ. ೧೯೨೪ ರಲ್ಲಿ ಕರ ವಿಚಾರಣಾ ಸಮಿತಿಯು (Taxation Enquiry Committee.) ಆಸ್ತಿಕರದ ಬಗೆಗೆ ಅನುಕೂಲ ಧೋರಣೆಯನ್ನು ತಾಳಿತು ಆದರೆ ಭಾರತೀಯ ಆರ್ಥಿಕ ರಚನೆಯಲ್ಲಿ ಅತೀವ ಬದಲಾವಣೆಯಾಗಿದ್ದರಿಂದ ಕೆಲವು ಕಾಲ ಮಸೂದೆಯನ್ನು ಮುಂದೆ ತಳ್ಳಲಾಯಿತು. ಭಾರತೀಯ ರಾಜಕಾರಣ ದಲ್ಲಿಯೂ ವಿಷಮತೆ ಉಂಟಾಗಿ ಪರಿಸ್ಥಿತಿ ಹತೋಟಿಯನ್ನು ಮೀರಿದ್ದ ರಿಂದ, ಮತ್ತೆ ಮಸೂದೆಯನ್ನು ಮುಂದಕ್ಕೆ ಹಾಕಲಾಯಿತು ದ್ವಿತೀಯ ಮಹಾಯುದ್ಧ ಪ್ರಾರಂಭವಾಗಿದ್ದರಿಂದ ಅನುಕೂಲ ವಾತಾ

---

ಶ್ರೀ ಕಾಕಾಸಾಹೇಬ ಗಾಡಗೀಳರು ಆಸ್ತಿಕರದ ಬಗ್ಗೆ ತಮ್ಮ ಅಭಿಪ್ರಾಯ ವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ. "ವೈಯಕ್ತಿಕ ಆಸ್ತಿಗಳ ಸಂಪಾದನೆ ಯಲ್ಲಾಗಲೀ, ಕಲೆಹಾಕುವದರಲ್ಲಾಗಲೀ ಸರಕಾರದ ಪಾಲುಗಾರಿಕಯಿದ್ದು, ವ್ಯಕ್ತಿಯ (ಭಾಗೀದಾರನ) ಮರಣದಿಂದ ಭಾಗೀದಾರಿಕೆ ಅಂತ್ಯ ಹೊಂದುವದ ರಿಂದ ಸರಕಾರವು ತನ್ನ ಭಾಗವನ್ನು ಪಡೆಯಲು ಅರ್ಹವಾಗಿದೆ" ಎಂದು ಹೇಳಿದ್ದು ಗಮನಾರ್ಹವಾಗಿದೆ.

ವರಣ ಬಂಲಾರದೆ ಹೋಯಿತು. ಮೊನ್ನೆ ಮೊನ್ನೆ ಆ ಯೋಜನಾ ಮಂಡಲವು ಈ ಕರವನ್ನು ತ್ವರಿತದಲ್ಲಿ ಜಾರಿಯಲ್ಲಿ ತರಲು ಸೂಚಿಸಿದ್ದರಿಂದ, ಆಗಸ್ಟ ೧೯೫೩ ರಲ್ಲಿ ಆಸ್ತಿಕರ ಮಸೂದೆಯನ್ನು ಭಾರತ ಪಾರ್ಲಿಮೆಂಟಿನಲ್ಲಿ ಮಂಡಿಸಲಾಯಿತು. ಈ ವಿಧೇಯಕದ ಬಗೆಗೆ ಪಾರ್ಲಿಮೆಂಟದಲ್ಲಿ ತುರುಸಿನ ಚರ್ಚೆಯಾದರೂ, ವಿಧೇಯಕವು ಅನೇಕರಿಂದ ಪ್ರಶಂಸಿಸಲ್ಪಟ್ಟಿತು.

"ಅಸ್ತಿತ್ವದಲ್ಲಿರುವ ಈ ಸಂಪತ್ತಿನ ವಿಷಮ ಹಂಚಿಕೆ ಒಂದೇ ಏಟಿನಲ್ಲಿ ನಿರ್ನಾಮವಾಗದು. ಈ ಕಾರ್ಯಕ್ಕೆ ಅಧಿಕ ಅವಧಿ ಬೇಕು-ಯಾಕಂದರೆ ಆಸ್ತಿಕರವು ವಿಷಮ ಹಂಚಿಕೆಯ ಪರಿಣಾಮಗಳೊಂದಿಗೆ ಕಾರ್ಯಪ್ರವರ್ತವಾಗುವದೇ ವಿನಃ ವಿಷಮ ಹಂಚಿಕೆಯ ಕಾರಣಗಳೊಂದಿಗಲ್ಲ"* ಎಂದು ಭಾರತದ ಅರ್ಥಸಚಿವ ಮಾನ್ಯ ಸಿ. ಡಿ. ದೇಶಮುಖರು ಹೇಳಿದ್ದು ಯಥಾರ್ಥವಾಗಿದೆ.

* ' It is axiomatic that the use of fiscal methods to reduce economic inequality is not effective at a stroke or even over a short period. It is a slow proces for the obvious reason that death duties deal with results and not causes of unequal distribution of weal th" —C. D. Deshmukh

# ಪ್ರಕರಣ ೨.



## ೧. ಕಾಯದೆ ಹಾಗೂ ಅದರ ವ್ಯಾಪ್ತಿ

"ಆಸ್ತಿಕರ ಕಾಯದೆ (೧೯೫೩)" ಎಂದು ಕರೆಯಲ್ಪಡುವ ಈ ಕಾಯದೆಯು, ಜಮ್ಮು ಮತ್ತು ಕಾಶ್ಮೀರವನ್ನು ಹೊರತುಪಡಿಸಿ, ಸಮಸ್ತ ಭಾರತದಲ್ಲಿ ಕಳೆದ ೧೯೫೩ ಅಕ್ಟೋಬರ ೧೫ ರಿಂದ ಅಮಲಿನಲ್ಲಿ ಬಂದಿರುವದು.

## ೨. "ಆಸ್ತಿ" ಎಂದರೇನು?

"ಆಸ್ತಿ"ಯ ವ್ಯಾಖ್ಯೆಯನ್ನು ಆಸ್ತಿ ಹಸ್ತಾಂತರ ಕಾನೂನಿ (Transfer of Property Act) ನಲ್ಲಿ ನಮೂದಿಸಿಲ್ಲ. ಅಲ್ಲದೆ ಆಸ್ತಿಕರ ಕಾನೂನಿನಲ್ಲಿಯೂ, ಆಸ್ತಿಯ ವ್ಯಾಖ್ಯೆಯ ಬಗೆಗೆ ಸರಿಯಾದ ತಿಳುವಳಿಕೆಯನ್ನು ಕೊಟ್ಟಿಲ್ಲ. ಸಾಮಾನ್ಯವಾಗಿ ಎಲ್ಲ ಸ್ಥಿರ ಹಾಗೂ ಅಸ್ಥಿರ ಆಸ್ತಿ, ನಗದು ಹಣ ಅಥವಾ ತತ್ಸಮ ವಸ್ತುಗಳು, ಅಂದರೆ ಸ್ಥಾವರ ಹಾಗೂ ಜಂಗಮ ಆಸ್ತಿಗಳೇ ಮೊದಲಾದವುಗಳು, 'ಆಸ್ತಿ'ಯ ವ್ಯಾಖ್ಯೆಯಲ್ಲಿ ಸಮಾವೇಶವಾಗುತ್ತವೆ.

ಸಾಮಾನ್ಯವಾಗಿ ಆಸ್ತಿಯನ್ನು ಎರಡು ಗುಂಪುಗಳಲ್ಲಿ ವಿಂಗಡಿಸಬಹುದಾಗಿದೆ.

i) ದರ್ಶನಾತ್ಮಕ ಆಸ್ತಿಗಳು ಅಥವಾ ಪ್ರತ್ಯಕ್ಷ ಆಸ್ತಿಗಳು (Tangible).

ii) ದರ್ಶನಾತ್ಮಕವಲ್ಲದ ಅಥವಾ ಪರೋಕ್ಷ ಆಸ್ತಿಗಳು (Intangible.)

ದರ್ಶನಾತ್ಮಕ ಆಸ್ತಿಗಳೆಂದರೆ, ಕಣ್ಣಿಗೆ ಕಾಣಬಹುದಾದ ಆಸ್ತಿಗಳೆಂದು ಕರೆಯಬಹುದಾಗಿದೆ. ಜಮೀನುಗಳು, ಕಟ್ಟಡಗಳು, ಯಂತ್ರೋಪಕರಣಗಳು, ಚಿನ್ನದ ಒಡವೆಗಳು, ನಗದು ಹಣ ಮೊದಲಾದವುಗಳನ್ನು ದರ್ಶನಾತ್ಮಕ ಆಸ್ತಿಗಳೆಂದು ಕರೆಯಬಹುದು. ಅದರಂತೆಯೇ ಶೇರುಗಳು, ಹೆರವರಿಗೆ ಕೊಟ್ಟ ಸಾಲಗಳು, ಸರಕಾರಿ ಅಥವಾ ಮುನ್ಸಿಪಲ್ ಸೆಕ್ಯುರಿಟಿಗಳನ್ನು ದರ್ಶನಾತ್ಮಕವಲ್ಲದ ಆಸ್ತಿಗಳೆಂದು ಕರೆಯಬಹುದಾಗಿದೆ. ಯಾಕಂದರೆ ಈ ವಸ್ತುಗಳು ಕಣ್ಣಿಗೆ ನೇರವಾಗಿ ಕಾಣದಿದ್ದರೂ ಆಸ್ತಿಯಷ್ಟೇ ಅವಕ್ಕೆ ಬೆಲೆ ಇವೆ.

ಆಸ್ತಿಗಳ ಈ ಎರಡು ಗುಂಪನ್ನು ಪುನಃ ಎರಡು ಗುಂಪುಗಳಲ್ಲಿ ವಿಂಗಡಿಸಬಹುದಾಗಿದೆ.

i) ಅಸ್ಥಿರ ಆಸ್ತಿಗಳು (Movable Property )

ii) ಸ್ಥಿರ ಆಸ್ತಿಗಳು (Immovable Property.)

ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು ಬರಬಹುದಾದ ಆಸ್ತಿಗಳನ್ನು ಅಸ್ಥಿರ ಆಸ್ತಿಗಳೆಂದೂ, ಒಂದೇ ಸ್ಥಳದಲ್ಲಿ ಕೊನೆಯವರೆಗೆ ಉಳಿಯಬಹುದಾದ ಆಸ್ತಿಗಳನ್ನು ಸ್ಥಿರ ಆಸ್ತಿಗಳೆಂದೂ ತಿಳಿಯಬಹುದು.

'ಆಸ್ತಿ'ಯ ವ್ಯಾಖ್ಯೆಯನ್ನು ಪರಿಪೂರ್ಣಮಾಡುವದಕ್ಕಾಗಿ ಅದರಲ್ಲಿ ಸಮಾವೇಶವಾಗುವ ವಸ್ತುಗಳ ಯಾದಿಯ ಮುಖ್ಯಾಂಶಗಳನ್ನು ಇಲ್ಲಿ ಕೊಡಲಾಗಿದೆ.

**ಅ) 'ದರ್ಶನಾತ್ಮಕ ಹಾಗೂ ಸ್ಥಿರ' ಆಸ್ತಿಗಳು.**

೧) ಕಾರಖಾನೆ ಮತ್ತು ಇನ್ನಿತರ ಕಟ್ಟಡಗಳು.

೨) ಗುದಾಮುಗಳು ಮತ್ತು ಅಂಗಡಿಗಳು.

೩) ಮನೆಗಳು.
೪) ಮನೆಯನ್ನು ಕಟ್ಟದೆ ಇರುವಂಥ ಪ್ಲಾಟುಗಳು.
೫) ಬೇಸಾಯದ ಭೂಮಿಗಳು

## ಬ) 'ದರ್ಶನಾತ್ಮಕ ಹಾಗೂ ಅಸ್ಥಿರ' ಆಸ್ತಿಗಳು

೧) ತಿಜೋರಿಗಳು ಮತ್ತು ಕಪಾಟುಗಳು
೨) ಫರ್ನಿಚರುಗಳು (ಮೇಜು, ಖುರ್ಚಿ, ಇತ್ಯಾದಿ.)
೩) ಅಲ್ಮೇರಾ ಮತ್ತು ರೆಫ್ರಿಜಿಯೇಟರುಗಳು.
೪) ಗೃಹೋಪಯೋಗಿ ಸಾಮಾನುಗಳು.
೫) ಕಾಜಿನ ಸಾಮಾನುಗಳು. (ಕಪ್ಪು, ಬಸಿ ಸಹಿತವಾಗಿ)
೬) ವಿದ್ಯುತ್ತಿನ ಉಪಕರಣಗಳು.
೭) ಚೈನಾ ಅಥವಾ ಹಳದೀ ಮಣ್ಣಿನಲ್ಲಿ ತಯಾರಿಸಿದ ವಸ್ತುಗಳು.
೮) ಮದ್ಯಗಳು
೯) ಆಕಳುಗಳು ಮತ್ತು ಇನ್ನಿತರ ಎಲ್ಲತರದ ದನಕರುಗಳು.
೧೦) ಚಿತ್ರಗಳು ಮತ್ತು ವರ್ಣರಂಜಿತ ಚಿತ್ರಗಳು.
೧೧) ಕಲಾತ್ಮಕ ಕೈಕೆಲಸಗಳು.
೧೨) ಛಾಯಾ ಚಿತ್ರಗಳು.
೧೩) ಫೌಂಟನ್ ಪೆನ್ನುಗಳು.
೧೪) ಟ್ಯಾಪರಾಯ್ಟರಗಳು.
೧೫) ರಿಸ್ಟವಾಚ, ಕ್ಲಾಕ ಮತ್ತು ಟೈಂಪಿಸುಗಳು.

೧೬) ರೆಡಿಯೊ ಮತ್ತು ಗ್ರಾಮೋಫೋನ.

೧೭) ಮಾರಲಿಕ್ಕೆ ಇಟ್ಟಂತಹ ಪುಸ್ತಕಗಳು.

೧೮) ಸಂಗೀತದ ಉಪಕರಣಗಳು. (ತಂಬೂರಿ, ತಬಲಾ ಇತ್ಯಾದಿ.)

೧೯) ನಗದು ಹಣ.

೨೦) ಆಭರಣಗಳು.

೨೧) ಕಾರ, ಟ್ರಕ್, ಮೋಟಾರಸೈಕಲ್, ಸೈಕಲ್, ಸ್ಟೇಶನ ವ್ಯಾಗೇನ ಮತ್ತು ಇನ್ನಿತರ ವಾಹನಗಳು

೨೨) ಟ್ರಾಕ್ಟರುಗಳು.

೨೩) ಟಾಂಗಾ, ಕುದುರೆ ಹಾಗೂ ಚಕ್ಕಡಿಗಳು.

೨೪) ಯಂತ್ರೋಪಕರಣಗಳು.

೨೫) ವ್ಯಾಪಾರದಲ್ಲಿದ್ದ ವಸ್ತುಗಳು (Stock in-trade.)

೨೬) ವೈದ್ಯಕೀಯ ಉಪಕರಣಗಳು.

೨೭) ತೋಟಗಳು.

೨೮) ಬೆಳೆಯುತ್ತಿರುವ ಪೈರುಗಳು ಇತ್ಯಾದಿ.

## ಕ) ದರ್ಶನಾತ್ಮಕವಲ್ಲದ ವಸ್ತುಗಳು ಅಥವಾ ಹಕ್ಕುಗಳು-

೧) ಮೇಲೆ ವಿವರಿಸಿದ ಆಸ್ತಿಯಲ್ಲಿ ಸಾಮಾನ್ಯವಾಗಿ ಮನುಷ್ಯನಿಗೆ ಇದ್ದ ಆಸ್ಥೆ (Interest). ಉದಾಹರಣೆಗಾಗಿ ಅ ಎಂಬವನು ತನ್ನ ಮೃತ್ಯುಪತ್ರದಲ್ಲಿ, ಬ ಎಂಬವನು ತನ್ನ ಜೀವಮಾನದ ವರೆಗೆ ಆಸ್ತಿಯನ್ನು ಉಪಭೋಗಿಸಬೇಕೆಂದೂ, ಬನ ಮರಣದ ನಂತರ ಆ ಆಸ್ತಿಯು ಕ ನಿಗೆ ಹೋಗಬೇಕೆಂದು ವಿವರಿಸಿದ್ದರೆ, ಬ ನು ಜೀವಂತವಿ

ರುವ ವರೆಗೆ ಕ ನಿಗೆ ಅವನ ಆಸ್ತಿಯಮೇಲೆ ಆಸ್ಥೆ ಇದೆ. ಒಂದು ವೇಳೆ ಕ ನು ಬ ನಿಗಿಂತಲೂ ಮೊದಲು ಮೃತನಾದರೆ ಆಸ್ಥೆಯೂ ಕೂಡ "ಆಸ್ತಿ"ಯಲ್ಲಿ ಸಮಾವೇಶವಾಗುವದು.

೨) ಮೃತನು ಬೇರೆಯವರಿಂದ ಬರುವ ನಷ್ಟಭರ್ತಿಗೆ ಅರ್ಹನಾಗಿದ್ದರೆ, ಆ ನಷ್ಟಭರ್ತಿಯೂ ಕೂಡ ಆಸ್ತಿಯಾಗುವದು. ( A right of action for damages or any actionable claim is property.)

೩) ಮೃತನು ಬೇರೆಯವರ ಹಿತಕ್ಕಾಗಿ ಅವರ ಸಾಲವನ್ನು ತೀರಿಸಿದ್ದರೆ, ಅದೂ ಮೃತನ ಆಸ್ತಿಯಾಗುವದು. ಉದಾಹರಣೆಗಾಗಿ ಅ ಎಂಬವನು ತಾನು ಸಾಯುವ ಪೂರ್ವದಲ್ಲಿ, ಬ ನ ಹಿತಕ್ಕಾಗಿ, ಬ ನು ಮಾಡಿದ ೨೦,೦೦೦ರೂ. ಸಾಲವನ್ನು ತೀರಿಸಿದ್ದರೆ, ಈ ೨೦,೦೦೦ ರೂಪಾಯಿಗಳು ಅ ನ ಆಸ್ತಿಯೆಂದೇ ಗ್ರಹಿಸಲಾಗುವದು.

೪) ವಿಮಾ ಹಣ ಅಥವಾ ಪ್ರಾವಿಡೆಂಟ ಫಂಡ, ಆಸ್ತಿಯಲ್ಲಿ ಸಮಾವೇಶವಾಗುವವು.

೫) ಸರಕಾರೀ ಸಾಲಗಳು ಹಾಗೂ ಬಾಂಡುಗಳು (ಮುನ್ಸಿಪಲ್ ಸಾಲ ಸಹಿತವಾಗಿ) ಅಂಚೆ ಮತ್ತು ರಾಷ್ಟ್ರೀಯ ಉಳಿತಾಯದ ಸರ್ಟಿಫಿಕೇಟ, ಬ್ಯಾಂಕಿನಲ್ಲಿ ಇಟ್ಟ ಎಲ್ಲ ತರಹದ ಹಣ, ಗುಡ್‌ವಿಲ್ಲ (Goodwill) ಟ್ರೇಡಮಾರ್ಕಿನ ಹಕ್ಕು, ಇನ್‌ಕಂಟ್ಯಾಕ್ಸ, ಸೇಲ-ಟ್ಯಾಕ್ಸ ಅಥವಾ ಬೇರೆ ಕರಗಳನ್ನು ಮೊದಲಿಗೆ ಹೆಚ್ಚಾಗಿ ಕೊಟ್ಟ ಹಣ ಅಪೀಲಿನಲ್ಲಿ ತಿರುಗಿ ಬರುವದಿದ್ದರೆ ( Refundable taxes ), ಪೇಟೆಂಟ ಮತ್ತು ರಾಯಲಿ ಹಕ್ಕುಗಳು ಮೃತನ ಆಸ್ತಿಯಲ್ಲಿ ಸಮಾವೇಶವಾಗುವವು.

## ಡ) ಒಕ್ಕಲುತನದ ಭೂಮಿಗಳ ಬಗ್ಗೆ ಸ್ಪಷ್ಟೀಕರಣ

ಒಕ್ಕಲುತನದ ಭೂಮಿಗಳು ಆಸ್ತಿಯಲ್ಲಿ ಸಮಾವೇಶವಾಗ ವೆಂದು ಮೇಲೆಯೇ ವಿವರಿಸಲಾಗಿದೆ. ಆದರೂ ಕೆಳಗೆ ನಮೂದಿಸಿದ ರಾಜ್ಯಗಳಲ್ಲಿ ಇದ್ದ ಬೇಸಾಯದ ಭೂಮಿಗಳು ಮಾತ್ರ ಕರಕ್ಕೆ ಪಾತ್ರ ವಾಗುವವು. **ಉಳಿದ ರಾಜ್ಯಗಳಲ್ಲಿ ಇದ್ದ ಬೇಸಾಯದ ಭೂಮಿ ಗಳು ಕರಕ್ಕೆ ಪಾತ್ರವಾಗುವದಿಲ್ಲ**

ಕೆಳಗೆ ಕೊಟ್ಟ ಪ್ರಾಂತಗಳಲ್ಲಿದ್ದ ಒಕ್ಕಲುತನದ ಭೂಮಿಗಳು ಮೃತನ ಆಸ್ತಿಗಳಾಗುವವು.

೧) ಮುಂಬಯಿ.
೨) ಮಧ್ಯಪ್ರದೇಶ.
೩) ಓಡಿಸಾ.
೪) ಪಂಜಾಬ.
೫) ಉತ್ತರ ಪ್ರದೇಶ.
೬) ಹೈದರಾಬಾದ.
೭) ಮಧ್ಯ ಭಾರತ.
೮) ರಾಜಸ್ಥಾನ.
೯) ಅಜಮೀರ.
೧೦) ಬಿಲಾಸಪೂರ.
೧೧) ಭೋಪಾಳ.
೧೨) ಕೊಡಗು.
೧೩) ದಿಲ್ಲಿ.
೧೪) ಹಿಮಾಚಲ ಪ್ರದೇಶ.

೧೫) ಕಚ್ಛ.

೧೬) ಮಣಿಪುರ.

೧೭) ತ್ರಿಪುರಾ.

೧೮) ವಿಂಧ್ಯ ಪ್ರದೇಶ ಇತ್ಯಾದಿ.

ಭಾರತೀಯ ಘಟನೆಯ ೨೫೨ನೇ ಕಲಮಿನನ್ವಯ ಕೇಂದ್ರಸರಕಾರವು ಒಕ್ಕಲುತನದ ಆಸ್ತಿಯನ್ನು ಹೊರ್ತುಪಡಿಸಿ ಇನ್ನುಳಿದ ಆಸ್ತಿಗಳ ಮೇಲೆ ಕರವನ್ನು ಹೇರಲು ಸಮರ್ಥವಿದ್ದು, ಒಕ್ಕಲುತನ ಆಸ್ತಿಗಳ ಮೇಲೆ ಕರವನ್ನು ಹೇರಲು ರಾಜ್ಯ ಸರಕಾರಗಳಿಗೆ ಹಕ್ಕನ್ನು ಕೊಡಲಾಗಿದೆ. ಆದರೆ ಈ ಆಸ್ತಿಕರ ಕಾಯದೆಯು ಅಖಿಲಭಾರತ ಕಾಯದೆ ಇದ್ದುದರಿಂದ ಎಲ್ಲ ರಾಜ್ಯಗಳಿಗೂ ಸಮನಾಗಿ ಅನ್ವಯಿಸಬೇಕಾಗಿದೆ. ಆದ್ದರಿಂದ ಕೇಂದ್ರ ಸರಕಾರದ ಆದೇಶದ ಮೇರೆಗೆ, ಆಸ್ತಿಕರ ಕಾನೂನಿನ ಪರಿಶಿಷ್ಟ ೧ ರಲ್ಲಿ ನಮೂದಿಸಿದ ರಾಜ್ಯಗಳು (ರಾಜ್ಯಗಳ ಹೆಸರುಗಳನ್ನು ಮೇಲೆ ವಿವರಿಸಲಾಗಿದೆ) ಘಟನೆಯಲ್ಲಿ ದಯಪಾಲಿಸಲ್ಪಟ್ಟ ತಮ್ಮ ಹಕ್ಕುಗಳನ್ನು, ತಮ್ಮ ತಮ್ಮ ವಿಧಾನ ಸಭೆಗಳಲ್ಲಿ ಪಾಸುಮಾಡಿಕೊಂಡು ಬಿಟ್ಟುಕೊಟ್ಟಿವೆ. ಅಂತಹ ರಾಜ್ಯಗಳಲ್ಲಿದ್ದ ಒಕ್ಕಲುತನದ ಭೂಮಿಗಳಿಗೆ ಮಾತ್ರ ಆಸ್ತಿಕರವು ಅನ್ವಯಿಸುವದು. ಉಳಿದ ರಾಜ್ಯಗಳಲ್ಲಿಯ ಒಕ್ಕಲುತನದ ಭೂಮಿಗಳ ಮೇಲೆ ಕರವು ಅನ್ವಯಿಸುವದಿಲ್ಲ.

ಮೇಲೆ ನಮೂದಿಸಿದ ಎಲ್ಲ ತರದ ಆಸ್ತಿಗಳು, 'ಆಸ್ತಿಯ' ವ್ಯಾಖ್ಯೆಯಲ್ಲಿ ಬರುವವು. ಸುಲಭವಾಗಿ ಹೇಳಬೇಕಾದರೆ—

೧) ಎಲ್ಲ ಸ್ಥಿರ ಹಾಗೂ ಅಸ್ಥಿರ ಆಸ್ತಿಯು ಭಾರತದಲ್ಲಿದ್ದರೆ, ಆದಕ್ಕೆ ಆಸ್ತಿಕರವು ಅನ್ವಯಿಸುವದು.

೨) ಭಾರತದ ಹೊರಗೆ ಅಸ್ಥಿರ ಆಸ್ತಿಯಿದ್ದರೆ, ಮೃತನು ಸಾಯುವ ಪೂರ್ವದಲ್ಲಿ ನ್ಯಾಯವಾಗಿ ಭಾರತದಲ್ಲಿ ವಾಸ್ತವ್ಯ ಮಾಡಿದ್ದರೆ, ಆ ಆಸ್ತಿಯು ಆಕರಣೆಗೆ ಪಾತ್ರವಾಗುವದು.

೩) ಭಾರತದ ಹೊರಗೆ ಸ್ಥಿರ ಆಸ್ತಿಯಿದ್ದರೆ, ಅದು ಈ ಕಾಯದೆಯ ಕಕ್ಷೆಯಲ್ಲಿ ಬರುವದಿಲ್ಲ.

## ೩) ವಿದೇಶಗಳಲ್ಲಿದ್ದ ಸ್ಥಿರ ಆಸ್ತಿಗಳು

ಕರಕ್ಕೆ ಪಾತ್ರನಾಗುವ, (ಮನುಷ್ಯನು), ಸಾಯುವ ಪೂರ್ವದಲ್ಲಿ ವಿದೇಶಗಳಲ್ಲಿ ಸ್ಥಿರ ಆಸ್ತಿಗಳನ್ನು ಸಂಪಾದಿಸಿಟ್ಟಿದ್ದರೆ, ಆ ಸ್ಥಿರ ಆಸ್ತಿಯು ಕರಕ್ಕೆ ಪಾತ್ರವಾಗುವದಿಲ್ಲ. ಉದಾಹರಣೆಗಾಗಿ ಅ ಎಂಬವನು ನ್ಯೂಯಾರ್ಕದಲ್ಲಿ ೩ ಲಕ್ಷ ರೂಪಾಯಿ ಬೆಲೆ ಬಾಳುವ ಒಂದು ಮನೆಯನ್ನು ಕೊಂಡಿದ್ದರೆ, ಅವನ ಮರಣದ ನಂತರ ಕರಕ್ಕೆ ಪಾತ್ರವಾಗುವ ಅವನ ಆಸ್ತಿಗಳ ಯಾದಿಗಳಲ್ಲಿ ಈ ಮನೆಯನ್ನು ಸೇರಿಸಲಾಗುವದಿಲ್ಲ. ಪ್ರಪಂಚದ ರಾಷ್ಟ್ರ ರಾಷ್ಟ್ರಗಳಲ್ಲಿ ಬೇರೆ ಬೇರೆ ಕಾನೂನು ಪ್ರಚಲಿತವಿರುವದರಿಂದ, ಈ ಸ್ಥಿರ ಆಸ್ತಿಗಳಿಂದ ಅಂತರ್ರಾಷ್ಟ್ರೀಯ ಸಮಸ್ಯೆಗಳು ಉದ್ಭೂತವಾಗುವದರಿಂದ ಇಂತಹ ಸ್ಥಿರ ಆಸ್ತಿಗಳನ್ನು ಕರಕ್ಕೆ ಗುರಿಮಾಡಲಾಗುವದಿಲ್ಲ. ಆದರೆ ಪರದೇಶದಲ್ಲಿದ್ದ ಅಸ್ಥಿರ ಆಸ್ತಿಗಳು ಮಾತ್ರ ಕರಕ್ಕೆ ಪಾತ್ರವಾಗುವವು.

## ೪. ಮೃತನ ಸಾಲಗಳು.

ಮೃತನು ಸಾಯುವ ಪೂರ್ವದಲ್ಲಿ ಎಷ್ಟೇ ಆಸ್ತಿಯನ್ನು ಗಳಿಸಿದಾಗ್ಯೂ, ಸಮಾನವಾದ ವ್ಯವಹಾರದಲ್ಲಿಯಾಗಲೀ, ಅಥವಾ ಗೃಹೋಪಯೋಗಕ್ಕಾಗಿಯಾಗಲೀ ಆತನು ಸಾಲವನ್ನು ಮಾಡಬೇಕಾಗಿ ಬರ

ಬಹುದು. ಈ ರೀತಿಯಾಗಿ ಮೃತನು ಸಾಲ ಮಾಡಿದ್ದರೆ, ಆತನ ಆಸ್ತಿಯ ಒಟ್ಟು ಬೆಲೆಯಲ್ಲಿ ಆತನು ಮಾಡಿದ ಸಾಲದ ಒಟ್ಟು ಬೆಲೆಯನ್ನು ವಜಾ ಮಾಡಲಾಗುವದು. ಆದರೆ ಇಂತಹ ಸಾಲಗಳು ನ್ಯಾಯಬದ್ಧವಾಗಿಯೂ ಹಾಗು ನಿಜವಾಗಿಯೂ ಅಸ್ತಿತ್ವದಲ್ಲಿರುವಂತಹವಾಗಿರಬೇಕು. ಆಸ್ತಿಕರದಿಂದ ಮುಕ್ತತೆ ಹೊಂದುವದಕ್ಕಾಗಿ ಕೃತಕ ಸಾಲಗಳನ್ನು ನಿರ್ಮಾಣ ಮಾಡಿರಕೂಡದು. ನ್ಯಾಯಬದ್ಧವಾದ ಸಾಲಗಳು ಯಾವದೇ ಬಗೆಯಾಗಿದ್ದರೂ ಅವುಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವದು.

ಮೃತನು ಮಾಡಬಹುದಾದ ಸಾಲಗಳ ವಿವಿಧ ಬಗೆಗಳನ್ನು ಕೆಳಗೆ ಕೊಡಲಾಗಿದೆ

ಅ) ಪೂರ್ಣ ಅಥವಾ ಅದಕ್ಕಿಂತಲೂ ಹೆಚ್ಚಿನ ಬೆಲೆಯ ವಸ್ತುಗಳನ್ನು ಆಡುವಾಗಿಟ್ಟು ತೆಗೆದ ಸಾಲಗಳು. (Secured Loans.)

ಬ) ಸಾಲದ ಬೆಲೆಗಿಂತಲೂ ಕಡಿಮೆ ಬೆಲೆಯಿರುವ ವಸ್ತುಗಳನ್ನು ಆಡುವಾಗಿಟ್ಟು ತೆಗೆದ ಸಾಲಗಳು. (Partly Secured Loans.)

ಕ) ಯಾವ ವಸ್ತುಗಳನ್ನೂ ವತ್ತಿ ಇಡದೆ ಪಡೆದ ಸಾಲಗಳು. (Unsecured Loans) ಪ್ರಾಮಿಸರಿನೋಟು, ಹುಂಡಿ,

ಡ) ಇತರ ಬಗೆಯ ಸಾಲಗಳು ಅಥವಾ ಕೊಡತಕ್ಕ ರಕಮು, ಡಾಕ್ಟರ ಅಥವಾ ಇನ್ನಿತರ ಜನರ ಬಿಲ್ಲು, ಕೊಡಬೇಕಾದ ಭಾಡಿಗೆ, ನೌಕರರ ಪಗಾರ, ಸಾಲಗಳ ಮೇಲೆ ಕೊಡಬೇಕಾದ ಬಡ್ಡಿ ಮೊದಲಾದವುಗಳು.

ಇ) ವಿಶೇಷ ಸಾಲಗಳು. (Special Debts.)

೧. ಬರಬಹುದಾದ ವಿಪತ್ತುಗಳಿಗೆ ತೆಗೆದಿಟ್ಟ ಹಣ. ಉದಾಹರಣೆಗಾಗಿ ಶೇರಿನ ಒಟ್ಟು ಬೆಲೆಯಲ್ಲಿ ಕೆಲವು ಭಾಗವನ್ನು ಮಾತ್ರ ಕೊಟ್ಟು, ಇನ್ನುಳಿದ ಬೆಲೆಗಾಗಿ ಕೊಡಬೇಕಾದ ಹಣ. ಈ ಹಣವನ್ನು ಯಾವಾಗಲಾದರೂ ಕಂಪನಿಯವರು ಕೇಳಬಹುದು.

೨. ಮುಸ್ಲಿಂ ಕುಟುಂಬ ಪದ್ಧತಿಯಂತೆ, ಗಂಡನು ಹೆಂಡತಿಗೆ ತೆರವು ಕೊಡಬೇಕಾಗಿದ್ದರೆ (ಅತಿ ಹೆಚ್ಚೆಂವರೆ ೫,೦೦೦ ರೂಪಾಯಿಗಳ ವರೆಗೆ ಮಾತ್ರ.)

## ೫) ಕರಕ್ಕೆ ಪಾತ್ರವಾಗುವ ಜನರು :—

ಕರಕ್ಕೆ ಪಾತ್ರವಾಗುವ ಆಸ್ತಿಯ ಒಡೆಯನು ಓರ್ವನಾದರೂ, ಅವನ ಮರಣಾನಂತರ, ಆಸ್ತಿಯ ಉಪಭೋಗದ ಹಕ್ಕನ್ನು ಅನೇಕ ಜನರು ಪಡೆಯಬಹುದು. ಆದ್ದರಿಂದ ಕರಕ್ಕೆ ಪಾತ್ರರಾಗುವ ಜನರು ಒಂದು ಪ್ರಕರಣದಲ್ಲಿ ಒಬ್ಬರೇ ಇದ್ದರೆ, ಇನ್ನೊಂದು ಪ್ರಕರಣದಲ್ಲಿ ಅನೇಕರೂ ಮತ್ತು ದೇಶದ ವಿವಿಧ ಭಾಗಗಳಲ್ಲಿ ವಾಸಿಸುವಂತಹರೂ ಆಗಿರಬಹುದು. ಮೃತನ ಆಸ್ತಿಯ ಉಪಭೋಗದ ಹಕ್ಕು ಯಾರಿಗೆ ಸಲ್ಲುತ್ತದೆಯೋ ಅಂತಹ ಪ್ರತಿಯೋರ್ವನೂ ಕರಕ್ಕೆ ಪಾತ್ರನಾಗುವ ವ್ಯಕ್ತಿಯಾಗುವನು. ( Accountable person )

## ೬ ಕರಾಕರಣೆ—

ಕಾಯದೆಯ ಹೆಸರೇ ಸೂಚಿಸುವಂತೆ, ಆಸ್ತಿಯ ಮೇಲೆ ಕರವನ್ನು ಆಕರಣೆ ಮಾಡಲಾಗುವದು. ಕರಭಾರದ ಆಕರಣೆ ಮಾಡುವಾಗ, ಮೃತನ ಒಟ್ಟು ಆಸ್ತಿಯನ್ನು ಗ್ರಹಿಸಲಾಗುವದೇ ಹೊರತು

ಮೃತನ ತರುವಾಯ ಆತನ ವಾರಸದಾರರು ಹಂಚಿಕೊಳ್ಳುವ ಆಸ್ತಿಯ ಮೇಲೆ ಅಲ್ಲವೆಂಬುದು ಲಕ್ಷ್ಯವಲ್ಲಿಡತಕ್ಕ ಸಂಗತಿಯಾಗಿದೆ. ಉದಾಹರಣೆಗಾಗಿ ಒಬ್ಬನು ಸಾಯುವ ಪೂರ್ವದಲ್ಲಿ ೧೦ ಲಕ್ಷ ರೂಪಾಯಿಗಳ ಆಸ್ತಿಯನ್ನೂ ಐದು ಮಂದಿ ಮಕ್ಕಳನ್ನೂ ಬಿಟ್ಟು ಹೋಗಿದ್ದರೆ, ಮೃತನ ಒಟ್ಟು ಆಸ್ತಿಯಾದ ೧೦ ಲಕ್ಷ ರೂಪಾಯಿಗಳ ಮೇಲೆ ಕರವನ್ನು ಹೇರಲಾಗುವದಲ್ಲದೆ, ಪ್ರತಿಯೋರ್ವ ಮಗನ ಎರಡು ಲಕ್ಷ ರೂಪಾಯಿಯ ಪಾಲಿನ ಮೇಲಲ್ಲವೆಂದು ನೆನಪಿನಲ್ಲಿಡತಕ್ಕದ್ದು. ಮೃತನ ತರುವಾಯ ಆವನ ಆಸ್ತಿಯು, ಆತನ ವಾರಸುದಾರರಲ್ಲಿ ಹಂಚಿ ಹೋಗುವ ಪೂರ್ವದಲ್ಲಿ, ಸರಕಾರವು ತನ್ನ ಹಕ್ಕಿನ ಹಣವನ್ನು ತೆಗೆದುಕೊಳ್ಳಲು ಬಾಧ್ಯಸ್ಥವಾಗಿದೆ. ಮೃತನ ಇಡಿಯ ಆಸ್ತಿಯಮೇಲೆ ಸರಕಾರದ ಹಕ್ಕು ಮೊಟ್ಟ ಮೊದಲನೆಯದಾಗಿದೆ. ಆಸ್ತಿಕರವನ್ನು, ಆದ್ದರಿಂದಲೇ ತುಲನಾತ್ಮಕ ದೃಷ್ಟಿಯಿಂದ ಉಳಿದ ಕರಗಳೊಡನೆ ನೋಡುವದು ಅವಶ್ಯವಾಗಿದೆ.

ವಾರಸಾಕರ (Succesion Duty) ಮತ್ತು ಆಸ್ತಿ ಕರ (Estate Duty) ಇವುಗಳಲ್ಲಿ ಮುಖ್ಯ ಭೇದವೇ ಇದಾಗಿದೆ.

೧) ವಾರಸಾಕರ ಆಕರಣೆ ಮಾಡುವಾಗ ಪ್ರತಿಯೋರ್ವನ ಪಾಲಿನ ಮೇಲೆ ಬರುವ ಆಸ್ತಿಯ ಮೇಲೆ ಕರವನ್ನು ಹೇರುವದಾದರೆ ಆಸ್ತಿಕರದ ಆಕರಣೆ ಮಾಡುವಾಗ ಒಟ್ಟು ಆಸ್ತಿಯನ್ನೇ ಗಣನೆಗೆ ತೆಗೆದುಕೊಳ್ಳಲಾಗುವದು.

೨) ವಾರಸಾಕರದ ಉದ್ದೇಶವು ಮೃತನ ಆಸ್ತಿಯನ್ನು ತನ್ನ ವಶದಲ್ಲಿ ತೆಗೆದುಕೊಳ್ಳುವದಕ್ಕಾಗಿ ಕೊಡುವ ಕರವಾಗಿದ್ದು, ಆಸ್ತಿಕರವು ಸರಕಾರ ಹಾಗೂ ಮೃತನೊಡನಿದ್ದ ಭಾಗೀದಾರಿಕೆಗೆ ಸಂಬಂಧಪಟ್ಟಿದೆ. ಆದ್ದರಿಂದಲೇ ಆಸ್ತಿಕರವು ಪಾಲುಗೊಳ್ಳುವ ಮುಂದೆ

ಕೋರ್ಟಿಗೆ ಕೊಡುವ 'ಸ್ಟಾಂಪ ಹಣ' ಅಥವಾ ಇನ್ನಾವದೇ ಮರಣ ಕರಗಳಲ್ಲವೆಂಬುದು ತಿಳಿದುಕೊಳ್ಳಬೇಕಾಗಿದೆ.

೧೫ ನೇ ಅಕ್ಟೋಬರ ೧೯೫೩ ರಂದು ಅಥವಾ ಅನಂತರ ಮರಣ ಹೊಂದಿದ ಪ್ರತಿಯೊಂದು ವ್ಯಕ್ತಿಯ ಆಸ್ತಿಯು, ಬೇರೆಯುವರಲ್ಲಿ ವರ್ಗಾಯಿಸಲ್ಪಟ್ಟಿದ್ದರೆ, ಈ ಕಾಯದೆಯ ಐದನೆಯ ಕಲಮಿನನ್ವಯ ಕರಕ್ಕೆ ಪಾತ್ರವಾಗುವದು.

ಆಸ್ತಿಕರ ಕಾನೂನಿನಲ್ಲಿಯೇ ಇದು ಮಹತ್ವದ ಕಲಮಾಗಿರುವದರಿಂದ, ಈ ಕಲಮಿಗೆ ಸ್ಪಷ್ಟೀಕರಣವು ಅವಶ್ಯವಾಗಿದೆ.

೧) "ಪ್ರತಿಯೋರ್ವ ವ್ಯಕ್ತಿ"ಯು ಅಂದರೆ ಭಾರತದ ನಿವಾಸಿಯಾದ ಅಥವಾ ನಿವಾಸಿಯಾಗಿರದ "ಪ್ರತಿಯೋರ್ವ ಮನುಷ್ಯನು" ಎಂದಾಗುತ್ತದೆ.

೨) ಇಂತಹ ಮನುಷ್ಯನು ಕಾಯದೆಯು ಅಮಲುಬಜಾವಣೆಯಾದನಂತರ ಅಂದರೆ ಅಕ್ಟೋಬರ ೧೫, ೧೯೫೩ ರಂದು ಅಥವಾ ಅನಂತರ ಮೃತಪಟ್ಟಿದ್ದರೆ ಮಾತ್ರ ಈ ಕಾಯದೆಯ ಕಕ್ಷೆಯಲ್ಲಿ ಬರುವನು.

೩) "ಬೇರೆಯುವರಿಗೆ ವರ್ಗಾಯಿಸಲ್ಪಟ್ಟಿದ್ದರೆ" ಅಂದರೆ ಮೃತನ ಮರಣದ ನಂತರ ತೀವ್ರವಾಗಿಯಾಗಲೀ ಅಥವಾ ಕೆಲವು ದಿನಗಳಾದ ಮೇಲಾಗಲೀ ಆಸ್ತಿಯು ಬೇರೆಯುವರಿಗೆ ವರ್ಗಾಯಿಸಲ್ಪಟ್ಟಿದ್ದರೆ' ಎಂಬ ಅರ್ಥವನ್ನು ಪಡೆಯುವದು.

ಆಸ್ತಿಯು ಸಾಮಾನ್ಯವಾಗಿ ಎರಡು ವಿಧವಾಗಿ ವರ್ಗಾಯಿಸಲ್ಪಡುವದು. ಮೊದಲನೆಯದಾಗಿ 'ತಾತ್ಕಾಲಿಕ ವರ್ಗಾಯಿಸೋಣ' ಎರಡನೆಯದಾಗಿ 'ಕಾಲಾಂತರ ವರ್ಗಾಯಿಸೋಣ'

ಉದಾಹರಣೆ ; 'ಅ'ನು ಮರಣ ಹೊಂದಿದ ನಂತರ ತೀವ್ರವಾಗಿ ಅವನ ಆಸ್ತಿಯು 'ಬ' ನಿಗೆ ವರ್ಗಾಯಿಸಿದರೆ, ಈ ವರ್ಗಾಯಿಸೋಣವು, 'ತೀವ್ರ ವರ್ಗಾಯಿಸೋಣ'ವಾಗುವದು. 'ಅ' ನು ತನ್ನ ಮೃತ್ಯುಪತ್ರದಲ್ಲಿ ತನ್ನ ಮರಣದ ನಂತರ, ಒಂದು ವರುಷದ ಮೇಲೆ ತನ್ನ ಆಸ್ತಿಯು 'ಬ' ನಿಗೆ ಸಲ್ಲಬೇಕೆಂದು ವಿಧಿಸಿದ್ದರೆ, ಈ 'ವರ್ಗಾಯಿಸೋಣವು' ಕೆಲವು ದಿನಗಳ ಅಂತರದ ಮೇಲಾಗುವ ವರ್ಗಾಯಿಸೋಣವಾಗುವದು. ಅದು ಕಾಲಾಂತರ ವರ್ಗಾಯಿಸೋಣವಾಗುವದು.

೪. 'ಆಸ್ತಿ' ಎಂದರೆ ಕಲಮು ೨ (೧೫) ರಲ್ಲಿ ವಿಶದೀಕರಿಸಿದ ಎಲ್ಲ ತರಹದ ಆಸ್ತಿಗಳು.

೫) ಸಾಮಾನ್ಯವಾಗಿ 'ವರ್ಗಾಯಿಸೋಣ'ವೆಂದರೆ ಕೈಯಿಂದ ಕೈಗೆ ಆಸ್ತಿಯು ವರ್ಗಾಯಿಸಲ್ಪಡಬಹುದೆಂದು ತಿಳಿಯಬಹುದಾದರೂ, ಈ ಕಾಯದೆಯಲ್ಲಿ ವರ್ಗಾಯಿಸೋಣಕ್ಕೆ ವಿಶೇಷ ಗಮನನನ್ನು ಕೊಡಲಾಗಿದೆ. ಆಸ್ತಿಯು ವರ್ಗಾಯಿಸಲ್ಪಡಬೇಕಾದಾಗ ಈ ಕೆಳಗಿನ ಮೂರು ಮಹತ್ವದ ಅಂಶಗಳು ಗಮನಿಸಲ್ಪಡಬೇಕು.

ಅ) ಆಸ್ತಿಯ ವರ್ಗಾಯಿಸೋಣವು (Passing) ವ್ಯಕ್ತಿಯ ಮರಣದಿಂದಲೇ ಉಂಟಾಗಿರಬೇಕು. (The Passing of Property must have been occasioned by a death after the Commencement of this Act.)

ಉದಾಹರಣೆಗಾಗಿ :- 'ಅ' ಎಂಬವನಿಗೆ 'ಬ' ಮತ್ತು 'ಕ' ಎಂಬ ಇಬ್ಬರು ಮಕ್ಕಳಿದ್ದಾರೆ. 'ಅ'ನು ಮೃತಪಟ್ಟನಂತರವೇ 'ಬ' ಮತ್ತು 'ಕ'ರಲ್ಲಿ ಆಸ್ತಿಯು ವರ್ಗಾಯಿಸಲ್ಪಡುವದು. ಈ 'ವರ್ಗಾಯಿಸುವಿಕೆ 'ಅ'ನ ಮರಣಾನಂತರವೇ ಸಾಧ್ಯ.

ಬ ) ಆಸ್ತಿಯು ವ್ಯಕ್ತಿಯ ಮರಣದ ಪೂರ್ವದಲ್ಲಿಯೂ ಹಾಗೂ ಮರಣಾನಂತರವೂ ಅಸ್ತಿತ್ವದಲ್ಲಿರಬೇಕು. ( The property must have a continuance existence before and after the death ) ಉದಾಹರಣೆಗಾಗಿ– 'ಅ' ನಿಗೆ ಪ್ರತಿವರ್ಷ ೬೦,೦೦೦ ರೂಪಾಯಿಗಳ ಪಗಾರ ಸಿಗುತ್ತದೆ. 'ಅ'ನು ಮರಣಹೊಂದಿದ ನಂತರ ಈ ಪಗಾರವು ನಿಲ್ಲಿಸಲ್ಪಡುವದರಿಂದ, ಈ ಆಸ್ತಿಗೆ ವ್ಯಕ್ತಿಯ ಮರಣಾನಂತರ ಅಸ್ತಿತ್ವವಿಲ್ಲ. ಆದ್ದರಿಂದ ಮೃತನ ತರುವಾಯ ಬೇರೆಯವರಿಗೆ ವರ್ಗಾಯಿಸಲ್ಪಡುವದಿಲ್ಲ.

ಕ ) ಆಸ್ತಿ ಉಪಭೋಗದ ಸಂಪೂರ್ಣ ಹಕ್ಕು ಮರಣಾನಂತರ ಇನ್ನೊಬ್ಬರಿಗೆ ವರ್ಗಾಯಿಸಲ್ಪಡಬೇಕು.

ಇಂಗ್ಲಂಡದ ಆರ್ಥಿಕ ಕಾಯದೆ ( Finance Acts of England)ಯಲ್ಲಾಗಲೀ, ಅಥವಾ ಅದರ ಆಧಾರದಮೇಲೆ ತಯಾರಿಸಿದ ಭಾರತೀಯ ಆಸ್ತಿಕರ ಕಾನೂನಿನಲ್ಲಾಗಲೀ, ಈ "ವರ್ಗಾಯಿಸೋಣವನ್ನು" ವಿಶದೀಕರಿಸಿಲ್ಲ. ಆದರೂ ಕೆಲವಾರು ಕೋರ್ಟಿನ ನಿರ್ಣಯಗಳ ಮೂಲಕ ಸಾಧಾರಣವಾಗಿ ಮೇಲಿನ ಮೂರು ಅಂಶಗಳು ಮಹತ್ವವಾದವುಗಳೆಂದು ಹೇಳಬಹುದಾಗಿದೆ.

ಎ ಜಿ. ವಿರುದ್ಧ ಮಿಲ್ನೆ ಪ್ರಕರಣದಲ್ಲಿ 'ವರ್ಗಾಯಿಸೋಣವನ್ನು ನ್ಯಾಯಾಲವು ಈ ರೀತಿಯಾಗಿ ವಿಶದೀಕರಿಸಿದೆ.. " ಆಸ್ತಿಯ ನೈಜವಾದ ಒಡೆತನವು ಒಬ್ಬನ ಮರಣದ ನಂತರ, ಇನ್ನೊಬ್ಬನಿಗೆ ಹಸ್ತಾಂತರವಾಗುವದೇ " ವರ್ಗಾಯಿಸೋಣ " *

A. G. Vs. Milne ( 1914 ) A. C. 765.



ಎ ಜಿ. ವಿರುದ್ಧ ಲಾಯಡ್ಸ ಬ್ಯಾಂಕ ಲಿಮಿಟೆಡ್ ಪ್ರಕರಣದಲ್ಲಿ ಕೋರ್ಟು 'ವರ್ಗಾಯಿಸೋಣ'ವನ್ನು ಈ ರೀತಿಯಾಗಿ ಸ್ಪಷ್ಟೀಕರಿಸಿದೆ. "ನ್ಯಾಯಬದ್ಧವಾದ ಆಸ್ತಿಯ ಒಡೆತನವು ಒಬ್ಬನ ಮರಣದಿಂದ ಇನ್ನೊಬ್ಬನಿಗೆ ಹಸ್ತಾಂತರಿಸಲ್ಪಡದಿದ್ದರೂ, ಆಸ್ತಿ ಉಪಭೋಗದ ಆಸ್ತಿಯು ಮೃತನಿಂದ ಇನ್ನೊಬ್ಬನಿಗೆ ಹಸ್ತಾಂತರಿಸಲ್ಪಟ್ಟರೆ, ಅದೂ ಕೂಡ ವರ್ಗಾಯಿಸೋಣವಾಗುತ್ತದೆ. "†

ಅದರಂತೆಯೇ "ನ್ಯಾಯಬದ್ಧವಾದ ಆಸ್ತಿಯ ಒಡೆತನವು ಮೃತನಿಂದ ಇನ್ನೊಬ್ಬರಿಗೆ ವರ್ಗಾಯಿಸಲ್ಪಟ್ಟಿದ್ದರೂ, ಆಸ್ತಿ ಉಪ ಭೋಗದ ಆಸ್ಥಿಯು (Beneficial Interest) ಹಸ್ತಾಂತರಿ ಸಲ್ಪಡದೇ ಇದ್ದರೆ, ಅದು ಆಸ್ತಿಯ ವರ್ಗಾಯಿಸೋಣವಾಗುವದಿಲ್ಲ" ಎಂದು ಆಡಾಮ್‌ಸನ್ ವಿರುದ್ಧ ಎ. ಜಿ. ಪ್ರಕರಣದಲ್ಲಿ ಕೋರ್ಟು ಸ್ಪಷ್ಟೀಕರಿಸಿದೆ. ‡

ಈ ಮೇಲಿನ ಪ್ರಕರಣಗಳಲ್ಲಾದ ಕೋರ್ಟ ನಿರ್ಣಯಗಳನ್ನು ಕೂಲಂಕುಷವಾಗಿ ಪರಿಶೀಲಿಸಿದರೆ, ಆಸ್ತಿಯ ಉಪಭೋಗದ ಸಂಪೂರ್ಣ ಹಕ್ಕು, ಒಬ್ಬರ ಮರಣಾನಂತರ ಇನ್ನೊಬ್ಬರಿಗೆ ಹಸ್ತಾಂತರವಾಗುವದೇ 'ವರ್ಗಾಯಿಸೋಣ' ವೆಂದು ಕರೆಯಬಹುದಾಗಿದೆ. ನ್ಯಾಯಬದ್ಧ ವಾದ ಆಸ್ತಿಯ ಒಡೆತನಕ್ಕಿಂತಲೂ, ಆಸ್ತಿಯ ಉಪಭೋಗದ ಆಸ್ಥಿಯೇ 'ವರ್ಗಾಯಿಸೋಣ'ದ ಮಹತ್ವದ ಅಂಶವೆಂದು ಕರೆಯಬಹುದಾಗಿದೆ.

ಆಸ್ತಿಯನ್ನು ವಿಶ್ವಸ್ತನು ಸರಿಯಾಗಿ ಮಾಡಿದ್ದರೆ, ಒಬ್ಬಧರ್ಮ ದರ್ಶಿಯ ಮರಣದಿಂದ ಉಳಿದ ಸದಸ್ಯರಿಗೆ ಅಥವಾ ಬೇರೆಯವರಿಗೆ

---

† A. G Vs. Loyds Bank Ltd (1935) A C. 382

‡ Adamson Vs. A. G. [1933] A. C. 251.

ಉಪಭೋಗದ ಹಕ್ಕು ಹಸ್ತಾಂತರವಾದಾಗಲೇ 'ವರ್ಗಾಯಿಸೋಣ' ವಾಗುವದು.

ಯಾವ ಆಸ್ತಿಯನ್ನು ವ್ಯತನು, ಸಾಯುವ ಕಾಲಕ್ಕೆ ವರ್ಗಾಯಿಸಲು ಸಮರ್ಥನಾಗಿರುವನೊ (Completent to dispose) ಅಂತಹ ಆಸ್ತಿಯು ಮರಣಾನಂತರ ವರ್ಗಾಯಿಸಲ್ಪಡುವದು. 'ಆಸ್ತಿಯನ್ನು ವರ್ಗಾಯಿಸಲು ಸಮರ್ಥನಾಗಿರುವ ಮನುಷ್ಯ' ನೆಂದರೆ ಯಾವ ಮನುಷ್ಯನಲ್ಲಿ ಆಸ್ತಿ ಇದೆಯೋ ಅಥವಾ ಆಸ್ತಿಯ ಬಗ್ಗೆ ಆಸ್ಥೆ ಇದೆಯೋ ಅಂಥವನು ಮಾತ್ರ ಆಸ್ತಿಯನ್ನು ವರ್ಗಾಯಿಸಲು ಸಮರ್ಥನಾಗುವನು. ಉದಾಹರಣೆಗಾಗಿ: 'ಅ' ನು ತನ್ನ ವೃತ್ಯಪತ್ರದಲ್ಲಿ, ತನ್ನ ಆಸ್ತಿಯನ್ನು 'ಬ'ನು ತನ್ನ ಜೀವಮಾನದವರೆಗೆ ಉಪಭೋಗಿಸಬೇಕೆಂದೂ, 'ಬ' ನ ಮರಣದ ನಂತರ 'ಕ' ನಿಗೆ ಆ ಆಸ್ತಿಯು ಸಲ್ಲಬೇಕೆಂದೂ ವಿಧಿಸಿದ್ದರೆ 'ಬ' ನಿಗೆ ಆಸ್ತಿ ಇದೆ, 'ಕ' ನಿಗೆ ಆ ಆಸ್ತಿಯ ಬಗ್ಗೆ ಆಸ್ಥೆ ಇದೆ. (Interest in property.) 'ಬ' ಮತ್ತು 'ಕ' ಇಬ್ಬರೂ ಆಗನೆಯ ಕಲಮಿನನ್ವಯ, ಆಸ್ತಿಯನ್ನು ವರ್ಗಾಯಿಸಲು ಸಮರ್ಥರಾಗಿರುವರು. "ವರ್ಗಾಯಿಸಲು ಸಮರ್ಥನಾಗು" ಎಂಬುದು ಆಸ್ತಿಯನ್ನು ಗಳಿಸಲು ಮನುಷ್ಯನು ಸಮರ್ಥನಾಗಿದ್ದಾನೆ ಎಂಬುದನ್ನೂ ವ್ಯಕ್ತಪಡಿಸುತ್ತದೆ.

ಯಾವದಾದರೊಂದು ಆಸ್ತಿಯ ಮೇಲೆ, ಒಬ್ಬ ಮನುಷ್ಯನ ಆಸ್ಥೆ ಕೆಲವು ಮಟ್ಟಿಗೆ ಮಾತ್ರ ಇದ್ದರೆ, ಅವನ ಆಸ್ತಿಯ ಮೇಲಿನ ಆಸ್ಥೆ ಎಷ್ಟರಮಟ್ಟಿಗೆ ಇದೆಯೋ, ಅಷ್ಟೇ ಆಸ್ತಿಯನ್ನು ವರ್ಗಾಯಿಸಬಹುದಾಗಿದೆ. ಉದಾಹರಣೆಗಾಗಿ'ಅ'ಎಂಬವನು ತನ್ನ ೫ ಲಕ್ಷ ರೂಪಾಯಿ ಆಸ್ತಿಯನ್ನು 'ಬ' ಎಂಬವನಿಗೆ ಒಂದು ಕರಾರಿನ ಮೇಲೆ ವರ್ಗಾಯಿಸಿದರೆ ಮತ್ತು ಆ ಕರಾರು 'ಬ'ನ ಹೆಂಡತಿಗೆ ೩ ಲಕ್ಷ ರೂಪಾಯಿಗಳಷ್ಟು ಆಸ್ಥೆ

ಯನ್ನು ನೀಡಿತ್ತೆಂದರೆ, 'ಬ'ನ ಹೆಂಡತಿಯ ತರುವಾಯ ಮೂರು ಲಕ್ಷ ರೂಪಾಯಿಗಳಷ್ಟು ಮಾತ್ರ ಆಸ್ತಿ ವರ್ಗಾಯಿಸಲ್ಪಡುವದು. ಆಸ್ತಿಯ ಒಟ್ಟು ಬೆಲೆಯು ೫ ಲಕ್ಷ ರೂಪಾಯಿಗಳಿದ್ದರೂ, 'ಬ'ನ ಹೆಂಡತಿಯ ಆಸ್ಥೆಯು ಮೂರು ಲಕ್ಷದಷ್ಟಿರುವದರಿಂದ, ಅವಳು, ಮೂರು ಲಕ್ಷದಷ್ಟು ಮಾತ್ರ ವರ್ಗಾಯಿಸಬಹುದಾಗಿದೆ.

## ೭. ಮರಣಾನಂತರ ಆಸ್ಥೆ ಲೋಪ ಹೊಂದುವದು.

## (Interest Ceasing on death)

ಯಾವ ಆಸ್ತಿಯಲ್ಲಿ, ಒಬ್ಬ ಮನುಷ್ಯನ ಆಸ್ಥೆ ಇದೆಯೋ, ಆ ಮನುಷ್ಯನ ಮರಣದ ನಂತರ ಆ ಆಸ್ಥೆಯು ಲೋಪ ಹೊಂದುವದು. ಆಸ್ಥೆಯು ಲೋಪ ಹೊಂದಿದ ನಂತರ ಆ ಆಸ್ತಿಯು ವರ್ಗಾಯಿಸಲ್ಪಡುವದು.

ಆಸ್ತಿಕರದ ಏಳನೆಯ ಕಲಮು ಆಸ್ಥೆ ಲೋಪ ಹೊಂದುವದರ ಬಗೆಗೂ ಹಾಗೂ ಆಸ್ತಿಯ ವರ್ಗಾಯಿಸುವಿಕೆಗೂ ಸಂಬಂಧಪಟ್ಟಿದೆ. ಆಸ್ತಿಕರದ ೫ನೇ ಕಲಮು 'ವರ್ಗಾಯಿಸೋಣ' ಕ್ಕೆ ಸಂಬಂಧಪಟ್ಟಿದೆ. ಆಸ್ಥೆ ಲೋಪಹೊಂದಿದ ನಂತರ ಉಂಟಾಗುವ ವಿಶಿಷ್ಟ ವರ್ಗಾಯಿಸೋಣವನ್ನು ಏಳನೆಯ ಕಲಮು ಸ್ಪಷ್ಟೀಕರಿಸುತ್ತದೆ. ಉದಾಹರಣೆಗಾಗಿ 'ಅ'ಎಂಬವನು 'ಬ' ಎಂಬವನಿಗೆ ತನ್ನ ಆಸ್ತಿಯನ್ನು ವರ್ಗಾಯಿಸಿ 'ಕ' ಎಂಬವನಿಗೆ ಆ ಆಸ್ತಿಯಿಂದ ೧೨೦೦ ರೂ. ವರ್ಷಾಶನವನ್ನು ನೀಡಬೇಕೆಂದು ವಿಧಿಸಿದ್ದರೆ,'ಕ'ನ ಮರಣದ ನಂತರ ಯಾವ ನೈಜಆಸ್ತಿಯೂ ವರ್ಗಾಯಿಸಲ್ಪಡುವದಿಲ್ಲ. ಯಾಕಂದರೆ ಆಸ್ತಿಯು 'ಬ'ನಲ್ಲಿಯೇ ಇದೆ. ಆ ಆಸ್ತಿಯ ಮೇಲೆ ವರುಷಕ್ಕೆ ೧೨೦೦ ರೂಪಾಯಿಗಳಷ್ಟು ಮಾತ್ರ 'ಕ'ನಿಗೆ ಆಸ್ಥೆ ಇದೆ. ಆದರೆ ಏಳನೆಯ ಕಲಮಿನನ್ವಯ 'ಕ' ನಮರಣದಿಂದ, 'ಕ'ನ ಈ ಆಸ್ಥೆ ಲೋಪ ಹೊಂದುವದರಿಂದ ಹಸ್ತಾಂತರವಾಗುವದು.

‘ಅ’ ಎಂಬುವನು ತನ್ನ ಮೃತ್ಯುಪತ್ರದಲ್ಲಿ ತನ್ನ ಆಸ್ತಿಯ ಮೇಲೆ ‘ಬ’ ಎಂಬುವನಿಗೆ ವರುಷಕ್ಕೆ ೧೨೦೦ ರೂಪಾಯಿಗಳ ವರ್ಷಾಶನವನ್ನು ಕೊಡಬೇಕೆಂದೂ, ‘ಬ’ನ ಮರಣದನಂತರ ‘ಕ’ಎಂಬವನಿಗೆ ೮೦೦ರೂ. ವರ್ಷಾಶನ ಕೊಡಬೇಕೆಂದೂ, ವಿಧಿಸಿದ್ದರೆ ಮತ್ತು ಸಂಪೂರ್ಣ ಆಸ್ತಿಯನ್ನು ‘ಡ’ ಎಂಬವನಿಗೆ ಕೊಡಮಾಡಿದ್ದರೆ, ‘ಬ’ ಎಂಬವನ ಮರಣದ ನಂತರ ಆ ಆಸ್ತಿಯ ಅಥವಾ ‘ಬ’ ನ ಆಸ್ಥಿಯ ಗತಿಯೇನು?

ಮೇಲಿನ ಉದಾಹರಣೆಯು ಗಮನಾರ್ಹವಾಗಿದೆ. ‘ಅ’ ಎಂಬವನ ಆಸ್ತಿಯು ‘ಡ’ನಿಗೆ ವರ್ಗಾಯಿಸಲ್ಪಟ್ಟಿದೆ. ‘ಬ’ನಿಗೆ ೧೨೦೦ ರೂಪಾಯಿಗಳ ವರ್ಷಾಶನ ಸಿಗುತ್ತಿದ್ದುದರಿಂದ, ‘ಬ’ನಿಗೆ ‘ಡ’ನ ಆಸ್ತಿಯಲ್ಲಿ ವರುಷಕ್ಕೆ ೧೨೦೦ ರೂಪಾಯಿಗಳಷ್ಟು ಆಸ್ಥಿ ಇದ್ದು, ಅವನ ಮರಣದ ನಂತರ ಆ ಆಸ್ಥಿಯು ಲೋಪಹೊಂದುವದು. ಆದರೆ ಅದೇ ಆಸ್ತಿಯ ಮೇಲೆ ‘ಬ’ ನ ಮರಣದಿಂದಾಗಿ ‘ಕ’ ನಿಗೆ ವರುಷಕ್ಕೆ ೮೦೦ ರೂಪಾಯಿಗಳು ಸಿಗುವದರಿಂದ, ಅವನಿಗೆ ಆಸ್ಥಿಯು ಪ್ರಾರಂಭವಾಗುತ್ತದೆ. ಆ ಆಸ್ತಿಯ ೧೨೦೦ ರೂಪಾಯಿಗಳ ಆಸ್ಥಿ ಲೋಪಹೊಂದಿ,‘ಕ’ನ ೮೦೦ ರೂಪಾಯಿಗಳ ಆಸ್ಥಿ ಪ್ರಾರಂಭವಾಗಿ, ಕೇವಲ ೪೦೦ ರೂಪಾಯಿಗಳಷ್ಟು ಆಸ್ಥಿ ಲೋಪ ಹೊಂದಿದರೂ ಅಷ್ಟೇ ಆಸ್ತಿಯು ವರ್ಗಾಯಿಸಲ್ಪಡುತ್ತದೆ ಎಂಬುದಾಗಿ ತಿಳಿಯಕೂಡದು ಹೊಸ ಆಸ್ಥಿ ನಿರ್ಮಾಣ ಹೊಂದುವದನ್ನು ಆಸ್ತಿಕರವು ನಿರೀಕ್ಷಿಸುವದೇ ಇಲ್ಲ. ಆಸ್ಥಿ ಎಲ್ಲಿ ಲೋಪಹೊಂದುವದೋ ಅಲ್ಲಿ ಆಸ್ತಿಯು ವರ್ಗಾಯಿಸಲ್ಪಡುವದು ಎಲ್ಲಿ ಆಸ್ತಿಯು ವರ್ಗಾಯಿಸಲ್ಪಡುವದೋ ಅಲ್ಲಿ ಆಸ್ತಿಕರವು ಅನ್ವಯಿಸಲ್ಪಡುವದು. ಆದ್ದರಿಂದ ‘ಬ’ ನ ಮರಣದ ನಂತರ ಅವನ೧೨೦೦ ರೂಪಾಯಿಗಳ ವರ್ಷಾಶನದ ಆಸ್ಥಿಯ ಮೇಲೆ ಕರವು ಅನ್ವಯಿಸುವದು.

ಒಬ್ಬ ಮೃತನ ಆಸ್ಥೆಯ ಮೇಲೆ ಅವನ ಆಸ್ತಿಯ ಬೆಲೆಯನ್ನು ತೆಗೆಯುವದೂ ಮಹತ್ವದ ವಿಷಯವಾಗಿದೆ. 'ಅ' ಎಂಬುವನು ತನ್ನ ಮರಣಪತ್ರದಲ್ಲಿ, ತನ್ನ ಆಸ್ತಿಯ ಮೇಲೆ, 'ಬ' ಎಂಬವನಿಗೆ ೧೨೦೦ ರೂಪಾಯಿಗಳ ವರ್ಷಾಶನವನ್ನು ಕೊಡಬೇಕೆಂದು ವಿಧಿಸಿದ್ದಾನೆ. ಆ ಆಸ್ತಿಯ ಒಟ್ಟು ಬೆಲೆಯು ೭೫,೦೦೦ ರೂಪಾಯಿಗಳೆಂದೂ ಮತ್ತು ಆಸ್ತಿಯಿಂದ ವರುಷಕ್ಕೆ ೩೬೦೦ ರೂಪಾಯಿ ಉತ್ಪನ್ನ ಬರುತ್ತದೆ ಎಂದು ಗ್ರಹಿಸೋಣ. ಬನ ಮರಣದ ನಂತರ ಅವನ ೧೨೦೦ ರೂಪಾಯಿಗಳ ವರ್ಷಾಶನದ ಆಸ್ಥೆ ಲೋಪ ಹೊಂದುವದರಿಂದ, ಅಷ್ಟು ಆಸ್ತಿಯ ಭಾಗವು ವರ್ಗಾಯಿಸಲ್ಪಡುತ್ತದೆ. ಒಟ್ಟು ಆಸ್ತಿಯ ವಾರ್ಷಿಕ ಉತ್ಪನ್ನ ೩೬೦೦ ರೂಪಾಯಿ ಇದ್ದಾಗ ಆ ಆಸ್ತಿಯ ಬೆಲೆ ೭೫ ಸಾವಿರ ರೂಪಾಯಿಗಳಿರುತ್ತದೆ ಆದ್ದರಿಂದ ಬನ ಆಸ್ತಿಯು ಅದರಲ್ಲಿ ೨೫೦೦೦ ರೂಪಾಯಿಗಳಷ್ಟು ಇದೆ ಎಂದು ತಿಳಿಯಲ್ಪಡುತ್ತದೆ.

$$\frac{೧೨೦೦ \times ೭೫,೦೦೦}{೩೬೦೦} = ೨೫೦೦೦$$

ಸ್ವಲ್ಪದರಲ್ಲಿ ಹೇಳಬೇಕಾದರೆ

$$\frac{\text{ಮೃತನ ಆಸ್ಥೆ} \times \text{ಆಸ್ತಿಯ ಒಟ್ಟು ಬೆಲೆ}}{\text{ಆಸ್ತಿಯ ವಾರ್ಷಿಕ ಉತ್ಪನ್ನ}}$$

ಈ ಪದ್ಧತಿಯಿಂದ ಮೃತನ ಆಸ್ತಿಯ ಬೆಲೆಯನ್ನು ತೆಗೆಯಬೇಕಾಗುವದು.

ಆದರೆ ಮೃತನು ಬೇರೊಬ್ಬರ ಆಸ್ತಿಯ ಧರ್ಮದರ್ಶಿಯಾಗಿದ್ದರೆ (Trustee) ಆತನ ಮರಣದ ತರುವಾಯ, ಆ ಆಸ್ತಿಯು ಇನ್ನೊಬ್ಬರಿಗೆ ಹಸ್ತಾಂತರವಾಗುವದಿಲ್ಲವಾದ ಕಾರಣ ಆ ಆಸ್ತಿಯು ಕರಕ್ಕೆ ಪಾತ್ರವಾಗಲಾರದು.

# ಪ್ರಕರಣ ೩.



## ೧. ಬಕ್ಷೀಸುಗಳು

"Donatio Mortis Causa" ಎಂದು ಕರೆಯಲ್ಪಡುವ ಬಕ್ಷೀಸುಗಳು, ಮೃತನು ಮೃತ್ಯುಶಯ್ಯೆಯಲ್ಲಿ ನೀಡುವ ಬಕ್ಷೀಸುಗಳಾಗಿವೆ. ಈ ಮೃತ್ಯುಶಯ್ಯೆಯಲ್ಲಿ ನೀಡುವ ಭಕ್ಷೀಸುಗಳು ಕರಾಕರಣೆಗೆ ಪಾತ್ರವಾಗಿವೆ.

ಭಾರತೀಯ ವಾರಸಾಕರದ (Indian Succession Act) ೧೯೧ ಕಲಮಿನನ್ವಯ, ಈ ಕೆಳಗಿನ ಅಂಶಗಳು ಬಕ್ಷೀಸುಗಳಲ್ಲಿ ಅತ್ಯವಶ್ಯವಾಗಿ ಇರಬೇಕಾಗುವದು.

೧) ಬಕ್ಷೀಸನ್ನಾಗಿ ಕೊಡುವ ಆಸ್ತಿಗಳು ಅಸ್ಥಿರ (Movable) ಆಸ್ತಿಗಳಿರಬೇಕು. ಮತ್ತು ಬಕ್ಷೀಸನ್ನು ಕೊಡುವ ವ್ಯಕ್ತಿಯು ತನ್ನ ಸಂಪೂರ್ಣ ಮನಸ್ಸಿನಿಂದಲೇ ಕೊಡಬೇಕು.

೨) ಬಕ್ಷೀಸನ್ನು ಕೊಡುವ ವ್ಯಕ್ತಿಯು ತನ್ನ ಮರಣವನ್ನು ನಿರೀಕ್ಷಿಸಿಕೊಡಬೇಕು. ಅಲ್ಲದೆ ಮರಣವು ನೈಸರ್ಗಿಕವಾಗಿ ಬರಬೇಕು. ಆತ್ಮಹತ್ಯವನ್ನು ಮಾಡಿಕೊಂಡವನು ಬಕ್ಷೀಸು ಪತ್ರ ಮಾಡಿದ್ದರೆ ಅದು ಕ್ರಮಬದ್ಧವಾಗಲಾರದು.

೩) ಬಕ್ಷೀಸು ಕೊಡುವವನ ಮರಣದ ನಂತರವೇ ಬಕ್ಷೀಸು ಕಾಯದೇಬದ್ಧವಾಗುವದು.

೪) ಬಕ್ಷೀಸು ಕೊಟ್ಟ ಆಸ್ಥಿರ ಆಸ್ತಿಯು ಹಸ್ತಾಂತರವಾಗಿರಬೇಕು. ಅಲ್ಲದೆ ನ್ಯಾಯಬದ್ಧವಾದ ಒಡೆತನವನ್ನು ಹಸ್ತಾಂತರ

ಮಾಡುವದರ ಜೊತೆಗೆ, ಅದನ್ನು ಬಕ್ಷೀಸು ತೆಗೆದುಕೊಂಡವನ ಸ್ವಾಧೀನ ಪಡಿಸಬೇಕು. ಉದಾಹರಣೆಗಾಗಿ: 'ಅ' ಎಂಬವನು ಮರಣ ಶಯ್ಯೆಯಲ್ಲಿ, ತನ್ನ ಕೆಲವು ಅಸ್ಥಿರ ಆಸ್ತಿಗಳನ್ನು ಎರಡು ಪೆಟ್ಟಿಗೆಗಳಲ್ಲಿ ಇಟ್ಟು ಆ ಪೆಟ್ಟಿಗೆಗಳ ಮೇಲೆ 'ಬ' ಮತ್ತು 'ಕ' ಎಂದು ಅನುಕ್ರಮವಾಗಿ ಬರೆದಿದ್ದರೆ, ಬ ಮತ್ತು ಕ ನಿಗೆ ಪೆಟ್ಟಿಗೆಗಳು ಹಸ್ತಾಂತರವಾಗದೇ ಇರುವದರಿಂದ, ಅವು ಬಕ್ಷೀಸುಗಳಾಗಲಾರವು. ಪೆಟ್ಟಿಗೆಗಳ ಮೇಲೆ 'ಬ' ಮತ್ತು 'ಕ' ಎಂದು ಅನುಕ್ರಮವಾಗಿ ಬರೆದಿದ್ದರೂ, ಅದರ ಒಡೆತನವು 'ಬ' ಮತ್ತು 'ಕ' ನಿಗೆ ಸಲ್ಲುವದಿಲ್ಲ. ಯಾಕಂದರೆ 'ಅ' ನು ತನ್ನ ಜೀವಮಾನದಲ್ಲಿ ಆ ಪೆಟ್ಟಿಗೆಗಳನ್ನು 'ಬ' ಮತ್ತು 'ಕ'ನಿಗೆ ಹಸ್ತಾಂತರ ಮಾಡಲಿಲ್ಲ. ಉದಾಹರಣೆ:- ಟಿಲ್‌ಗಾಫ ವಿರುದ್ಧ ಫೀಡರ ಪ್ರಕರಣ ದಲ್ಲಿ ಕೆಳಗಿನ ಘಟನೆಗಳು ನಡೆದವು. ಓರ್ವ ಹೆಂಗಸು ತಾನು ಸಾಯು ವದನ್ನು ನಿರೀಕ್ಷಿಸಿ, ತನ್ನ ಮುತ್ತು, ರತ್ನ, ಹಣ ಮತ್ತು ಬ್ಯಾಂಕ ಪಾಸ ಬುಕ್ಕುಗಳುಳ್ಳ ಕೈಚೀಲವನ್ನು ಇನ್ನೊಬ್ಬರಿಗೆ ಹಸ್ತಾಂತರಿಸಿದಳು. ಕೋರ್ಟು ಈ ಪ್ರಕರಣದಲ್ಲಿ ತೀರ್ಪನ್ನು ನೀಡುತ್ತ, ಮುತ್ತು, ರತ್ನ ಹಾಗು ಹಣ ಇಷ್ಟೇ ಬಕ್ಷೀಸುಗಳೆಂದೂ ಬ್ಯಾಂಕ ಪಾಸ ಬುಕ್ಕನ್ನು ಇನ್ನೊಬ್ಬನಿಗೆ ಹಸ್ತಾಂತರಿಸುವದರಿಂದ, ಬ್ಯಾಂಕಿನಲ್ಲಿಯ ಹಣ ಹಸ್ತಾಂತರವಾಗುವದಿಲ್ಲವೆಂದೂ ಸ್ಪಷ್ಟೀಕರಿಸಿತು.

ಉದಾಹರಣೆ:- 'ಅ' ಎಂಬವನು ಅತ್ಯಂತ ಅನಾರೋಗ್ಯದಿಂದ ಬಳಲುತ್ತಿರುವಾಗ, ತನ್ನ ಸಾವನ್ನು ನಿರೀಕ್ಷಿಸಿ, ತನ್ನ ನಗದುಹಣ, ವಜ್ರವೈಡೂರ್ಯಗಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿ, ಆ ಪೆಟ್ಟಿಗೆಯನ್ನು 'ಬ' ಎಂಬವನಿಗೆ ಹಸ್ತಾಂತರಿಸಿದನು. ಅಲ್ಲದೆ ಅದರ ಬೀಗದ ಕೈಯನ್ನು ತನ್ನ ಮಗನಿಗೆ ಕೊಟ್ಟನು. 'ಅ'ನ ಮರಣದ ನಂತರ 'ಬ' ನಿಗೆ ಪೆಟ್ಟಿಗೆಯ ನ್ಯಾಯಬದ್ಧವಾದ ಒಡೆತನವಿದ್ದರೂ

ಬೀಗದ ಕೈಯನ್ನು ಇನ್ನೊಬ್ಬನಿಗೆ ಮೃತನು ಕೊಟ್ಟಿದ್ದರಿಂದ, ಪೆಟ್ಟಿಗೆಯು 'ಬ'ನ ಸ್ವಾಧೀನವಾಗಿರಲಿಲ್ಲ. ಆದ್ದರಿಂದ ಪೆಟ್ಟಿಗೆಯು ಹಸ್ತಾಂತರವಾಗಿದ್ದರೂ, ಅದು ಕ್ರಮಬದ್ಧವಾದ ಬಕ್ಷೀಸಾಗುವದಿಲ್ಲ.

ಹಿಂದೂ ಕಾಯದೆಯ ಪ್ರಕಾರ ಈ ಮೃತ್ಯು-ಶಯ್ಯೆ ಬಕ್ಷೀಸುಗಳಿಗೆ ( Donatio Mortis Causa ) ಉಳಿದ ಬಕ್ಷಿಸುಗಳೊಡನೆ ಹೋಲಿಸಿದರೆ, ಯಾವ ವೈಶಿಷ್ಟ್ಯವೂ ಇಲ್ಲ ಈ ತರಹದ ಬಹುಮಾನವು ಲೇಖಿಯಿಂದಾಗಲೀ ಅಥವಾ ತೋಂಡಿಯಿಂದಲಾಗಲೀ ಮಾಡಬಹುದಾಗಿದೆ. ಆದರೆ ಮೊಹಮ್ಮಡನ್ ಕಾಯದೆಯನ್ವಯ, 'ಮರಝುತಮಂತ' ಎಂದು ಕರೆಯಲ್ಪಡುವ ಮೃತ್ಯು-ಶಯ್ಯೆ ಬಕ್ಷೀಸುಗಳು ಮೃತನ ನ್ಯಾಯಬದ್ಧ ವಾರಸದಾರರು ತಮ್ಮ ಅನುಮತಿ ಕೊಡದ ಹೊರತು, ಕ್ರಮಬದ್ಧವಾಗಲಾರವು.

" Donatio Mortis Causa " ಎಂದು ಕರೆಯಲ್ಪಡುವ ಬಕ್ಷೀಸುಗಳನ್ನು, ಮೃತನು ಸಾವನ್ನು ನಿರೀಕ್ಷಿಸಿ, ಮೃತ್ಯು-ಶಯ್ಯೆಯಮೇಲೆ ನೀಡುವ ಬಕ್ಷೀಸುಗಳಾಗಿವೆ. ಮೃತನು ಅನಾರೋಗ್ಯದಿಂದ ಗುಣಹೊಂದಿ, ಮೃತ್ಯುಶಯ್ಯೆಯಿಂದ ಪಾರಾದರೆ ಈ ಬಕ್ಷೀಸುಗಳು ಕ್ರಮಬದ್ಧವಾಗಲಾರವು. ಅಥವಾ ಬಕ್ಷೀಸನ್ನು ತೆಗೆದುಕೊಂಡವನು ಮೃತನಿಗಿಂತಲೂ ಮೊದಲು ಮೃತಪಟ್ಟರೆ, ಬಕ್ಷೀಸು ಕ್ರಮಬದ್ಧವಾಗಲಾರದು. ಬಕ್ಷೀಸು ಕೊಡುವವನ ಮರಣದ ನಂತರವೇ ಬಕ್ಷೀಸುಗಳು ಕ್ರಮಬದ್ಧವಾಗುವವು.

ಮರಣಶಯ್ಯೆಯಲ್ಲಿ ನೀಡಿದ ಬಕ್ಷೀಸುಗಳು ಮತ್ತು ಸಾಮಾನ್ಯ ಬಕ್ಷೀಸುಗಳು ಅಥವಾ ದೇಣಿಗೆಗಳು ( Gift ) ಇವುಗಳಲ್ಲಿ ಎರಡು ಮಹತ್ವದ ಅಂತರಗಳಿವೆ

೧) ಮರಣಶಯ್ಯೆಯಲ್ಲಿ ನೀಡಿದ ಬಕ್ಷೀಸುಗಳು, ಬಕ್ಷಿಸು ಕೊಡುವವನು ಗುಣಹೊಂದಿದರೆ ಪುನಃ ಅವನಿಗೇ ಸೇರುವವು. ಆದರೆ ಸಾಮಾನ್ಯ ಬಕ್ಷಿಸುಗಳು ಹಾಗೆ ದೇಣಿಗೆದಾರನ ಕೈಗೆ ಸೇರಲಾರವು.

೨) ಮೃತನ ಆಸ್ತಿಯು, ಆತನ ಸಾಲಕ್ಕಿಂತಲೂ ಕಡಿಮೆಯಿದ್ದರೆ ಮೃತ್ಯುಶಯ್ಯೆಯಲ್ಲಿ ನೀಡಿದ ಬಕ್ಷೀಸುಗಳನ್ನು ತೆಗೆದುಕೊಂಡವನು ಈ ಕೊರತೆಯನ್ನು ತುಂಬಿಕೊಡಬೇಕಾಗುವದು. ಆದರೆ ಸಾಮಾನ್ಯ ಬಕ್ಷೀಸುಗಳನ್ನು ತೆಗೆದುಕೊಂಡವನು ಕೊರತೆಗೆ ಬಾಧ್ಯಸ್ತನಾಗಲಾರನು.

ಈ ಎರಡೂ ಬಹುಮಾನಗಳು ( ದೇಣಿಗೆಯು ಮೃತನ ಮರಣದ ಎರಡು ವರುಷಗಳ ಪೂರ್ವದಲ್ಲಿದ್ದರೆ ) ಕರಕ್ಕೆ ಪಾತ್ರವಾಗುವವು.

## ೨. ಸಾಮಾನ್ಯ ದೇಣಿಗೆಗಳು

ಸಾಮಾನ್ಯ ದೇಣಿಗೆಗಳೆಂದರೆ, ಯಾವನಾದರೊಬ್ಬ ಮನುಷ್ಯನು ತನ್ನ ಎಲ್ಲ ಆಸ್ತಿಯನ್ನು ಅಥವಾ ಆಸ್ತಿಯ ಕೆಲವು ಭಾಗಗಳನ್ನು ಬೇರೊಬ್ಬರಿಗೆ ಯಾವ ಪ್ರತಿಫಲವೂ ಇಲ್ಲದೆ ವರ್ಗಾಯಿಸಿದರೆ, ಅದು "ದೇಣಿಗೆ" ಎಂದು ಕರೆಯಲ್ಪಡುವದು. ಇದಕ್ಕೆ "ಬಕ್ಷೀಸು" ಅಥವಾ "ಬಹುಮಾನ" ವೆಂದೂ ಕರೆಯುವದುಂಟು.

ಈ ರೀತಿಯಾದ ನ್ಯಾಯಬದ್ಧ ದೇಣಿಗೆಗಳು ಅಥವಾ ಬಹುಮಾನಗಳು—

೧) ಸಾರ್ವಜನಿಕ ಸಂಸ್ಥೆಗಳಿಗೆ ಮೃತನ ಮರಣದ ಪೂರ್ವದಲ್ಲಿ ಆರು ತಿಂಗಳ ಒಳಗಾಗಿಯೇ ನೀಡಿದ್ದರೆ

೨) ಇತರರಿಗಾಗಿ (ಸಾರ್ವಜನಿಕ ಸಂಸ್ಥೆಗಳನ್ನು ಹೊರ್ರ್ತುಪಡಿಸಿ) ಬಹುಮಾನಗಳು ಮೃತನ ಮರಣ ಎರಡು ವರ್ಷಗಳ ಪೂರ್ವದಲ್ಲಿ ನೀಡಲ್ಪಟ್ಟಿದ್ದರೆ-

ಕರಕ್ಕೆ ಪಾತ್ರವಾಗುವವು. ಅಂದರೆ ಸಾರ್ವಜನಿಕ ಸಂಸ್ಥೆಗಳಿಗೆ ದೇಣಿಗೆಯನ್ನು ನೀಡಿದ ನಂತರ ಆರು ತಿಂಗಳ ಮೇಲೆ ಮೃತನು ಮರಣ ಹೊಂದಿದರೆ ಮತ್ತು ಇತರರಿಗೆ ಬಹುಮಾನಗಳನ್ನು ನೀಡಿದ ನಂತರ, ಎರಡು ವರ್ಷಗಳ ಮೇಲೆ ಮೃತನು ತೀರಿಕೊಂಡರೆ, ಬಕ್ಷೀಸೆಂದು ಜಾಹೀರಪಡಿಸಿದ ಈ ಆಸ್ತಿಗಳು ಕರದಿಂದ ಮುಕ್ತ ಮಾಡಲ್ಪಡುವವು.

ಕಾಯದೆಯಲ್ಲಿ ನಿರ್ದಿಷ್ಟಪಡಿಸಿದ ಅವಧಿಯಲ್ಲಿ (೬ ತಿಂಗಳ ಮರಣದ ಮುಂಚೆ ಸಾರ್ವಜನಿಕ ಸಂಸ್ಥೆಗಳಿಗೆ, ಎರಡು ವರ್ಷ ಮರಣದ ಮುಂಚೆ ಇತರರಿಗೆ) ಯಾವ ಆಸ್ತಿಯು ಬಹುಮಾನ ಅಥವಾ 'ಬಕ್ಷೀಸ' ಅಥವಾ ದೇಣಿಗೆ ರೂಪದಿಂದ ಹಸ್ತಾಂತರವಾಗಿದೆಯೋ, ಆ ಆಸ್ತಿಯು ಕರಕ್ಕೆ ಪಾತ್ರವಾಗುವದು. ಅಲ್ಲದೆ ಯಾವ ಆಸ್ತಿಯು ಬಹುಮಾನ ಅಥವಾ ಬಕ್ಷೀಸು ಎಂದು ನೀಡಲ್ಪಟ್ಟಿರುವದೋ ಆ ಆಸ್ತಿಯು ನ್ಯಾಯಬದ್ಧವಾದ ಹಸ್ತಾಂತರ ಹೊಂದಿರಬೇಕು.

ಉದಾಹರಣೆ ೧ — 'ಅ' ಎಂಬವನು 'ಬ' ಎಂಬವನಿಗೆ ಒಂದು ಮನೆಯನ್ನು ಖರೀದಿ ಮಾಡಲು ೧೦,೦೦೦ ರೂಪಾಯಿಗಳ ಬಕ್ಷೀಸನ್ನು ನೀಡಿದ್ದರೆ, 'ಅ'ನು ೧೦,೦೦೦ರೂ ಕೊಟ್ಟದಿನವೇ ಬಕ್ಷೀಸು ಜಾರಿಯಲ್ಲಿ ಬರುವದು. 'ಬ'ನು ಮನೆಯನ್ನು ಎಂದೇ ಕೊಂಡುಕೊಂಡಿರಲಿ ಅದನ್ನು ಗಣನೆಗೆ ತೆಗೆದುಕೊಳ್ಳಲಾಗುವದು.

ಉದಾಹರಣೆ:- 'ಅ' ಎಂಬವನು ೧೦,೦೦೦ ರೂಪಾಯಿಗಳಿಗೆ ಒಂದು ಮನೆಯನ್ನು ಕೊಂಡು ಅದನ್ನು 'ಬ' ನಿಗೆ ಬಕ್ಷೀಸನ್ನಾಗಿ

ಕೊಟ್ಟರೆ, ಮನೆಯ ಒಡೆತನವನ್ನು ಬಿಟ್ಟುಕೊಟ್ಟ ಬಗ್ಗೆ ಕಾಗದ ಪತ್ರ ಮಾಡಿದ ದಿನದಿಂದ ಬಕ್ಷೀಸು ಜಾರಿಯಲ್ಲಿ ಬರುವದೇ ವಿನಃ ಹತ್ತು ಸಾವಿರ ರೂಪಾಯಿಗಳನ್ನು ಕೊಟ್ಟ ದಿನದಿಂದಲ್ಲ. ಯಾಕಂದರೆ, ಇಲ್ಲಿ ಬಕ್ಷೀಸು ಹಣದ ಬಕ್ಷೀಸಾಗಿರದೆ ಮನೆಯ ಬಕ್ಷೀಸಾಗಿರುವದು.

ಆಸ್ತಿಕರ ಕಾಯದೆ ಕಲಮು ೯ ರನ್ವಯ, ನಿರ್ದಿಷ್ಟ ಪಡಿಸಿದ ಅವಧಿಯಲ್ಲಿ, ಯಾವ ಆಸ್ತಿಯು ಬಕ್ಷೀಸೆಂದು ಇನ್ನೊಬ್ಬರಿಗೆ ನೀಡಲ್ಪಟ್ಟಿರುವದೋ, ಮೃತನ ಮರಣದ ದಿನದಂದು ಪೇಟೆಯಲ್ಲಿಯ ಆಸ್ತಿಯ ಬೆಲೆಯನ್ನು ಗಮನಿಸಲಾಗುವದು. ಬಕ್ಷೀಸು ನೀಡಿದಂದು ಆಸ್ತಿಯ ಬೆಲೆಯು ಎಷ್ಟೇ ಇದ್ದರೂ ಅದನ್ನು ಗಣನೆಗೆ ತಾರದೆ, ಮೃತನ ಮರಣದ ಕಾಲಕ್ಕೆ ಆ ಆಸ್ತಿಯ ಬೆಲೆಯನ್ನು ಮಾತ್ರ ಗಣಿಸಲಾಗುವದು. ಉದಾಹರಣೆಗಾಗಿ ‘ಅ’ ಎಂಬವನು ತನ್ನ ೨೦,೦೦೦ ರೂಪಾಯಿಗಳ ಆಸ್ತಿಯನ್ನು ‘ಬ’ ಎಂಬವನಿಗೆ ಬಕ್ಷಿಸನ್ನಾಗಿ ಕೊಟ್ಟನು. ‘ಅ’ ನ ಮರಣದಂದು ಆ ಆಸ್ತಿಯ ಬೆಲೆಯು ೨೫,೦೦೦ ರೂಪಾಯಿಗಳಷ್ಟಿದರೆ ೨೫೦೦೦ ರೂ. ಗಳು ಆಕರಣೆಗೆ ಪಾತ್ರವಾಗುವವು.

ಆದರೆ ಬಕ್ಷೀಸನ್ನಾಗಿ ಕೊಟ್ಟ ಆಸ್ತಿಯು ಮೃತನ ಮರಣದ ಕಾಲಕ್ಕೆ ನಾಶವಾಗಿದ್ದರೆ, ಅಥವಾ ಅಸ್ತಿತ್ವದಲ್ಲಿರದಿದ್ದರೆ, ಆ ಆಸ್ತಿಯ ಮೇಲೆ ಕರವನ್ನು ಹೇರಲಾಗುವದಿಲ್ಲ. ಉದಾಹರಣೆಗಾಗಿ ೧೯೫೨ ಡಿಶಂಬರ ೧೪ನೇ ತಾರೀಖಿನ ದಿಬಸ ‘ಅ’ ಎಂಬವನು ತನ್ನ ಒಂದು ಮನೆಯನ್ನು ‘ಬ’ ಎಂಬವನಿಗೆ ಬಕ್ಷೀಸನ್ನಾಗಿ ನೀಡಿನನು. ೧೯೫೩ ಅಗಸ್ಟ ೩೦ನೇ ತಾರೀಖಿನ ದಿವಸ ಆ ಮನೆಯು ಬೆಂಕಿಯಿಂದ ನಾಶ ಹೊಂದಿತು. ಮುಂದೆ ‘ಅ’ ನು ೧೯೫೩ ಅಕ್ಟೋಬರ ೨೦ರಂದು ಮರಣ ಹೊಂದಿದನು. ‘ಅ’ ನ ಮರಣದ ಮುಂದೆ, ‘ಬ’ ನಿಗೆ ಬಕ್ಷೀಸು ಕೊಟ್ಟ ಮನೆಯು ಅಸ್ತಿತ್ವದಲ್ಲಿರಲಿಲ್ಲ. ಆದ್ದರಿಂದ ಇದು

ಕರಕ್ಕೆ ಪಾತ್ರನಾಗುವದಿಲ್ಲ. ಆದರೆ ಮನೆಯು ಬೆಂಕಿಯಿಂದ ನಾಶ ಹೊಂದಿದರೂ, ಮನೆಯ ಜಾಗೆಯು ನಾಶಹೊಂದದೆ ಇದ್ದುದರಿಂದ ಆದರ ಬೆಲೆಯನ್ನು ಮಾತ್ರ ಕರಕ್ಕೆ ಗುರಿಮಾಡಲಾಗುವದು.

ಇಲ್ಲಿ ಒಂದು ವಿವಾದಾಸ್ಪದ ವಿಷಯವನ್ನು ಚರ್ಚಿಸುವದು ಅವಶ್ಯವಾಗಿದೆ. ಮೇಲೆ ಹೇಳಿದ ಉದಾಹರಣೆಯಲ್ಲಿ ಆ ಮನೆಯು ೧೦,೦೦೦ ರೂಪಾಯಿಗಳಿಗೆ ವಿಮಾ ಇಳಿಸಲಾಗಿತ್ತೆಂದು ತಿಳಿಯೋಣ. ಮನೆಯು ಬೆಂಕಿಯಿಂದ ನಾಶಹೊಂದಿದ್ದರಿಂದ, ೧೦,೦೦೦ ರೂಪಾಯಿಗಳು, ಬಕ್ಷೀಸನ್ನು ತೆಗೆದುಕೊಂಡವನಿಗೆ ಬಂದವು. ಆದ್ದರಿಂದ ಮೃತನ ಮರಣದ ತರುವಾಯು, ವಿಮಾ ಕಂಪನಿಯಿಂದ ಬಂದ ಹಣವು ಆಸ್ತಿ ಕರಕ್ಕೆ ಪಾತ್ರವಾಗುವದೋ ಅಥವಾ ಇಲ್ಲವೋ?

ಸಿ.ಎನ್. ಬೆಟ್ಟಿ, ಇವರು ಇಂತಹ ಈನ್ಸೂರನ್ಸದಿಂದ ಬಂದ ಹಣವು ಕರಕ್ಕೆ ಪಾತ್ರವಾಗಲಾರದೆಂದು ತಮ್ಮ ಪುಸ್ತಕದಲ್ಲಿ ಬರೆದಿದ್ದಾರೆ.* ಯಾಕಂದರೆ ಬಕ್ಷೀಸು ಮಾಡಿದ ಆಸ್ತಿಯು ಮನೆಯು ಇತ್ತೆವಿನಹ ವಿಮಾಹಣವಿರಲಿಲ್ಲ. ಮೃತನ ಮರಣದ ಕಾಲಕ್ಕೆ ಬಕ್ಷೀಸಿನ ಆಸ್ತಿಯ ಬೆಲೆಯನ್ನು ಗ್ರಹಿಸಬೇಕೇ ಹೊರತು, ಬಕ್ಷೀಸಿನ ಆಸ್ತಿಯಿಂದ ಉಂಟಾದ ರೂಪಾಂತರಗಳನ್ನು ಆಸ್ತಿಕರ ಕಾಯದೆಯು ಮಾನ್ಯ ಮಾಡುವದಿಲ್ಲ. ಆದ್ದರಿಂದ ವಿಮಾ ಹಣವು ಕರಕ್ಕೆ ಪಾತ್ರವಾಗಲಾರದೆಂದು ಅಭಿಪ್ರಾಯಪಟ್ಟಿದ್ದಾರೆ. ಆದರೆ ಮೃತನು ಪೂರ್ಣ ವಿಮೆ ಇಳಿಸಿದ ಮನೆಯನ್ನು ಬಕ್ಷೀಸನ್ನಾಗಿ ನೀಡಿದ್ದರೆ, ಮನೆ ಹಾಗೂ ವಿಮಾ ಬಕ್ಷೀಸಾಗುವದರಿಂದ ಮನೆ ನಾಶಹೊಂದಿರುವದರಪರಿಣಾಮವಾಗಿ ಬಂದ ವಿಮಾಹಣವೂ ಕರಕ್ಕೆ ಗುರಿಯಾಗುವದು.

---

* 'The Elements of Estate Duty'- by C. N. Beattie

ಆಸ್ತಿಕರದ ಆಕರಣೆ ಮಾಡುವಾಗ, ಬಕ್ಷೀಸನ್ನಾಗಿ ಕೊಟ್ಟ ಆಸ್ತಿಯನ್ನು ಗಣಿಸಲಾಗುವದೇ ಹೊರತು ಆಸ್ತಿಯಿಂದುಂಟಾದ ರೂಪಾಂತರಗಳನ್ನು ಗಮನಿಸಲಾಗುವದಿಲ್ಲ. ಉದಾಹರಣೆಗಾಗಿ, ೧೯೫೨ ನವ್ಹಂಬರ ೧೩ ರಂದು 'ಅ' ಎಂಬವನು 'ಬ' ಎಂಬವನಿಗೆ ೧೦,೦೦೦ ರೂಪಾಯಿಗಳ ಬಕ್ಷೀಸನ್ನು ನೀಡಿದನು. ೧೯೫೩ ಜನವರಿ ೨೪ ರಂದು 'ಬ' ನು ಆ ಹಣದಿಂದ ಒಂದು ಲಿಮಿಟೆಡ್ ಕಂಪನಿಯ ಶೇರುಗಳನ್ನು ಕೊಂಡನು. ೧೯೫೩ ಸಪ್ಟಂಬರ ೨೨ ರಂದು ಆ ಕಂಪನಿಯು ದಿವಾಳಿಯನ್ನು ತೆಗೆದದ್ದರಿಂದ 'ಬ'ನ ಶೇರುಗಳೆಲ್ಲವೂ ನಿರ್ನಾಮವಾಗಿ ಹೋದವು. ೧೯೫೩ ಅಕ್ಟೋಬರ ೧೬ ರಂದು 'ಅ' ನು ತೀರಿಕೊಂಡನು. 'ಅ'ನು ಬಕ್ಷೀಸು ಕೊಟ್ಟ ೧೦,೦೦೦ ರೂಪಾಯಿಗಳು ಶೇರುಗಳಾಗಿ ರೂಪಾಂತರ ಹೊಂದಿ, 'ಅ' ನು ಮರಣ ಹೊಂದಿದ ಸಮಯದಲ್ಲಿ ನಿರ್ನಾಮವಾಗಿ ಹೋಗಿದ್ದವು. ಆದರೆ 'ಅ' ನು ೧ ,೦೦೦ ರೂಪಾಯಿಗಳ ಬಕ್ಷೀಸನ್ನು ಕೊಟ್ಟಿದ್ದಾನೆಯೇ ವಿನಃ ಶೇರುಗಳ ಬಕ್ಷೀಸನ್ನು ಕೊಟ್ಟಿಲ್ಲವಾದ್ದರಿಂದ, ಈ ಆಸ್ತಿಯ ರೂಪಾಂತರವನ್ನು ಕಾಯದೆಯು ಮಾನ್ಯ ಮಾಡದೆ, ೧೦,೦೦೦ ರೂಪಾಯಿಯ ಬಕ್ಷೀಸಿನಮೇಲೆ ಆಕರಣೆಮಾಡಲಾಗುವದು.

ಪರದೇಶದಲ್ಲಿದ್ದ ಆಸ್ತಿಯ ಬಗೆಗೂ ಒಂದು ಮಹತ್ವದ ವಿಷಯವನ್ನು ಇಲ್ಲಿ ವಿವೇಚಿಸಬೇಕಾಗಿದೆ. ಬಕ್ಷೀಸು ಕೊಟ್ಟ ಆಸ್ತಿಯು ಬಕ್ಷೀಸುಕೊಟ್ಟ ದಿನದಂದು ಯಾವ ದೇಶದಲ್ಲಿ ಇದೆಯೆಂದು ನೋಡಬೇಕೊ ಅಥವಾ ಮೃತನ ಮರಣದಂದು ಯಾವ ದೇಶದಲ್ಲಿ ಇದೆ ಎಂದು ನೋಡಬೇಕೊ ಎಂಬುದು ಗಮನಿಸತಕ್ಕ ವಿಷಯವಾಗಿದೆ. ಉದಾಹರಣೆಗಾಗಿ- ೧೯೫೧ ಡಿಶಂಬರ ೨೦ ರಂದು 'ಅ' ಎಂಬವನು ಪ್ಯಾರಿಸಿನಲ್ಲಿದ್ದ ತನ್ನ ಆಸ್ತಿಯನ್ನು 'ಬ' ಎಂಬವನಿಗೆ ಬಕ್ಷೀ

ಸನ್ನಾಗಿ ಕೊಟ್ಟನು. ೧೯೫೨ ಡಿಶೆಂಬರ ತಿಂಗಳಲ್ಲಿ 'ಬ'ನು ಪ್ಯಾರಿ ಸಿನಲ್ಲಿಯ ಆಸ್ತಿಯನ್ನುಮಾರಿ ಮುಂಬೈಯಲ್ಲಿ ಆಸ್ತಿಯನ್ನುಕೊಂಡನು ೧೯೫೩ ಆಕ್ಟೋಬರ ೧೫ ರಂದು 'ಅ'ನು ಮರಣ ಹೊಂದಿದನು. ಈ ಬಕ್ಷೀಸುಕೊಟ್ಟ ಆಸ್ತಿಯು ಆಕರಣೆಗೆ ಪಾತ್ರವಾಗುವದೇಹೇಗೆ ?

ಆಸ್ತಿಕರ ಕಾಯದೆಯ ಕಲಮು ೨೧ (೧) ರನ್ವಯ, ಪರದೇಶ ದಲ್ಲಿದ್ದ ಸ್ಥಿರ ಆಸ್ತಿಯ ಮೇಲೆ ಆಕರಣೆಯನ್ನು ಮಾಡಲಾಗುವದಿಲ್ಲ. 'ಅ' ನು ಪರದೇಶದಲ್ಲಿದ್ದ ಆಸ್ತಿಯ ಬಕ್ಷೀಸು ಕೊಟ್ಟಿದ್ದರೂ ಮೃತನು ಸಾಯುವ ಮುಂದೆ ಆ ಆಸ್ತಿಯು ಭಾರತೀಯ ಆಸ್ತಿಯಾಗಿತ್ತು, ಆದ್ದ ರಿಂದ ಇದು ಕರಕ್ಕೆ ಪಾತ್ರವಾಗುತ್ತದೆ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ 'ಅ'ನು ಪರದೇಶದಲ್ಲಿದ್ದ ಸ್ಥಿರ ಆಸ್ತಿಯನ್ನು ಬಕ್ಷೀ ಸನ್ನಾಗಿ ಕೊಟ್ಟಿದ್ದಾನೆ. ಆಸ್ತಿಕರವು ಬಕ್ಷೀಸನ್ನಾಗಿ ಕೊಟ್ಟ ಆಸ್ತಿ ಯನ್ನು ಗಣನೆಗೆ ತೆಗೆದುಕೊಳ್ಳುವದೇ ಹೊರ್ತು ಅದರ ರೂಪಾಂತರ ವನ್ನು ಮಾನ್ಯ ಮಾಡುವದಿಲ್ಲ. ಆದ್ದರಿಂದ ಅದರ ರೂಪಾಂತರಗಳು ಏನೇ ಆಗಿರಲಿ. ಅವು ಈ ಕಾಯದೆಯ ಕಕ್ಷೆಯಲ್ಲಿ ಬರಲಾರವು ಎಂದು ನಾನು ಅಭಿಪ್ರಾಯಪಡುತ್ತೇನೆ. ಆಸ್ತಿಕರ ಕಾನೂನು ಇದನ್ನು ಸ್ಪಷ್ಟೀ ಕರಿಸಿಲ್ಲವೆಂಬುದನ್ನು ಗಮನಿಸಬೇಕು.

## ಕೆಲವು ಕೋರ್ಟ ನಿರ್ಣಯಗಳು—

ಆಸ್ತಿಕರದಿಂದ ಮುಕ್ತತೆ ಹೊಂದುವದಕ್ಕಾಗಿ ಬಕ್ಷೀಸು—

೧) ನ್ಯಾಯಬದ್ಧವಾಗಿರಬೇಕು. (Bonefide)

೨) ಮೃತನು ಸಾಯುವ ಪೂರ್ವದಲ್ಲಿ ಎರಡು ವರ್ಷ ಮುಂಚಿ ತವಾಗಿ (ಸಾರ್ವಜನಿಕ ಸಂಸ್ಥೆಗಳಿಗೆ ದೇಣಿಗೆ ನೀಡಿದ್ದರೆ ಆರು ತಿಂಗಳು) ಬಕ್ಷೀಸುಗಳನ್ನು ಕೊಟ್ಟಿರಬೇಕು.

ಮೇಲೆ ನಮೂದಿಸಿದ ಎರಡು ಅಂಶಗಳಲ್ಲಿ, ಎರಡನೆಯದನ್ನು ಮೇಲೆ ವಿವರವಾಗಿ ಚರ್ಚಿಸಿದೆ. ನ್ಯಾಯಬದ್ಧ ಭಕ್ಷೀಸನ್ನು (Gift) ಕುರಿತು ಎ ಜಿ. ವಿರುದ್ಧ ರಿಚಮಂಡ ಪ್ರಕರಣದಲ್ಲಿ† "ಯಾವದೇ ಖಾಸಗಿ ಅಥವಾ ಗುಪ್ತ ಕರಾರುಗಳನ್ನೊಳಗೊಳ್ಳದ, ದೇಣಿಗೆದಾರನು ಆಸ್ತಿಯನ್ನೂ ಅಥವಾ ಹಕ್ಕನ್ನೂ ಕಾಯ್ದಿರಿಸಿರದಂಥ, ಕ್ರಮಬದ್ಧವಾದ ಬಕ್ಷೀಸು" ಎಂದು ಕೋರ್ಟು ವಿಶದೀಕರಿಸಿದೆ. ಎ. ಜಿ. ವಿರುದ್ಧ ಫ್ಯಾರಲ್ ಪ್ರಕರಣದಲ್ಲಿಯೂ* ಕೋರ್ಟು ಇಂತಹದೇ ಒಂದು ನಿರ್ಣಯವನ್ನು ನೀಡಿದೆ.

## ೩. ಆಸ್ತಿ ಉಪಭೋಗದ ಹಕ್ಕನ್ನು ಕಾಯ್ದಿರಿಸುವದು.

ಆಸ್ತಿಕರವನ್ನು ತಪ್ಪಿಸುವದಕ್ಕಾಗಿ ಆಸ್ತಿಯ ಉಪಭೋಗದ ಹಕ್ಕನ್ನು ಸಂಪೂರ್ಣವಾಗಿ ಬಿಟ್ಟುಕೊಡದೆ, ಆಸ್ತಿಗಳನ್ನು ಬಕ್ಷೀಸುಗಳನ್ನಾಗಿ ಮೃತನು ನೀಡಿದ್ದರೆ, ಆ ಆಸ್ತಿಯು ಕರಾಕರಣೆಗೆ ಪಾತ್ರವಾಗುವದು. ಮೃತನು ತನ್ನ ಆಸ್ತಿಯನ್ನು ಬೇಕಾದವರಿಗೆ ಬಕ್ಷೀಸನ್ನಾಗಿ ಕೊಡಲು ಸಮರ್ಥನಿದ್ದು, ಬಕ್ಷೀಸು ಕೊಟ್ಟ ಎರಡು ವರುಷಗಳ ನಂತರ ಅವನು ಮೃತಪಟ್ಟರೆ, ಆ ಭಕ್ಷೀಸುಗಳು ಕರಕ್ಕೆ ಪಾತ್ರವಾಗುವದಿಲ್ಲ. ಆದರೆ ಇಂತಹ ಬಕ್ಷೀಸುಗಳು ಈ ಮೊದಲೇ ವಿವರಿಸಿದಂತೆ–

೧) ಬಕ್ಷೀಸು ತೆಗೆದುಕೊಂಡವನಿಂದ ತೀವ್ರವಾಗಿ ವಶಪಡಿಸಿಕೊಂಡಿರಬೇಕು.

೨) ಬಕ್ಷಿಸನ್ನು ಕೊಟ್ಟವನು ಇಂತಹ ಆಸ್ತಿಗಳ ಒಡೆತನದಿಂದ ಮುಕ್ತನಾಗಿರಬೇಕು.

† A. G. Vs. Richmond (1907) 2. k. B. 1940.

* A. G. Vs. Farrel (1931) I. K. B. 81 [C. A ]

೩) ಬಕ್ಷೀಸನ್ನು ಕೊಟ್ಟವನು ಯಾವ ರೀತಿಯಿಂದಲೂ ಬಕ್ಷೀಸನ್ನು ನೀಡಿದ ಆಸ್ತಿಗಳ ಉಪಭೋಗಕ್ಕೆ ಪಾತ್ರನಾಗಲಾರನು. ಅಲ್ಲದೆ ಬಕ್ಷೀಸನ್ನು ತೆಗೆದುಕೊಂಡವನು ಆಸ್ತಿಯನ್ನು ಕೇವಲ ತನ್ನ ವಶದಲ್ಲಿ ತೆಗೆದುಕೊಂಡರೆ ಸಾಲದು. ಅದರ ನ್ಯಾಯಬದ್ಧವಾದ ಒಡೆತನವು ಬಕ್ಷೀಸನ್ನು ನೀಡಿದನಂತರ ಬಕ್ಷಿಸನ್ನು ತೆಗೆದುಕೊಂಡ ವನಿಗೆ ಹಸ್ತಾಂತರವಾಗಬೇಕು. ಹೊಲ-ಮನೆಗಳನ್ನು ಬಹುಮಾನ ವೆಂದು ನೀಡಿದ್ದರೆ ತಕ್ಕ ಕಾಗದಪತ್ರಗಳು ಬಕ್ಷೀಸನ್ನು ತೆಗೆದು ಕೊಂಡವನ ಹೆಸರಿಗೆ ಮಾಡಲ್ಪಡಬೇಕು. ಶೇರುಗಳನ್ನು ಬಹು ಮಾನಗಳೆಂದು ನೀಡಿದ ಪಕ್ಷದಲ್ಲಿ ಶೇರ-ಸರ್ಟಿಫಿಕೆಟಗಳು ಮತ್ತು ಟ್ರಾನ್ಸಫರ ಕಾಗದ–ಪತ್ರಗಳು ತೆಗೆದುಕೊಂಡವನ ಹೆಸರಿಗೆ ವರ್ಗಾ ಯಿಸಲ್ಪಡಬೇಕು. ನಗದು ಹಣವನ್ನು ಬಕ್ಷೀಸನ್ನಾಗಿ ನೀಡಿದ್ದರೆ, ನಗದುಹಣವನ್ನು, ಬಕ್ಷೀಸನ್ನು ತೆಗೆದುಕೊಂಡ ದಿನ ಸ್ವಾಧೀನ ಪಡಿಸ ಬೇಕು. ಮಿಲ್‌ರಾಯ್ ವಿರುದ್ಧ ಲಾರ್ಡ ಪ್ರಕರಣದಲ್ಲಿ, ಕೆಲವು ಶೇರಗಳು ಬಕ್ಷೀಸಾಗಿ ಕೊಡಲ್ಪಟ್ಟಿದ್ದವು. ಆದರೆ ಶೇರುಗಳನ್ನು ಹಸ್ತಾಂತರ ಮಾಡುವಾಗ, ತಪ್ಪು ಟ್ರಾನ್ಸಫರ ಪತ್ರಗಳು ಉಪ ಯೋಗಿಸಲ್ಪಟ್ಟದ್ದರಿಂದ ಬಕ್ಷೀಸಿನ ನಾಯಬದ್ಧವಾದ ಒಡೆತನವು ಬಕ್ಷೀಸನ್ನು ತೆಗೆದುಕೊಂಡವನಿಗೆ ಹೋಗಲಿಲ್ಲವೆಂದು ಕೋರ್ಟು ನಿರ್ಣಯಿಸಿತು. ‡ ಆದರಂತೆಯೇ ರೀ ಓವ್ವೆನ್ ಪ್ರಕರಣದಲ್ಲಿ, ಓರ್ವನು ಕೆಲವು ಹಣವನ್ನು ಬಕ್ಷೀಸನ್ನಾಗಿ ನೀಡಿ ಆಪ್ರಕಾರವಾಗಿ ಒಂದು ಚೆಕ್ಕನ್ನು ಬರೆದು ಬಕ್ಷೀಸನ್ನು ತೆಗೆದುಕೊಂಡವನಿಗೆ ಕೊಟ್ಟನು. ಆದರೆ ಕೇವಲ ಚೆಕ್ಕನ್ನು ಹಸ್ತಾಂತರ ಮಾಡುವದು ಹಣವನ್ನು ಬಕ್ಷೀಸನ್ನಾಗಿ ಕೊಟ್ಟಂತಾಗಲಿಲ್ಲವೆಂದೂ, ಆ ಚೆಕ್ಕು ಬ್ಯಾಂಕಿನಲ್ಲಿ

‡ Milroy Vs. Lord (1862) 4, De G. F. & J. 264.

ಚಲಾವಣೆಯಾಗಿ ಬಕ್ಷೀಸನ್ನು ತೆಗೆದುಕೊಂಡವನು ಮಾಲೀಕನಾ ಗುವವರೆಗೆ ಬಕ್ಷೀಸು ಕ್ರಮಬದ್ಧವಲ್ಲವೆಂದು ಕೋರ್ಟು ನಿರ್ಣಯಿಸಿತು. *

ಆದರೆ ಮೃತನು ಬಕ್ಷೀಸನ್ನು ನೀಡುವಾಗ, ಬಕ್ಷೀಸನ್ನು ನೀಡಿದ ಆಸ್ತಿಯ ಉಪಭೋಗದ ಹಕ್ಕನ್ನು ತನಗಾಗಿ ಕಾದಿರಿಸಲ್ಪಟ್ಟಿದ್ದರೆ ಆ ಆಸ್ತಿಯು ಕರಕ್ಕೆ ಪಾತ್ರವಾಗುವದು. ಆ ಬಕ್ಷೀಸುಎಂದೇ ಮಾಡಿರಲಿ ಕಾಯದೆಯು ಅದನ್ನು ಗಮನಿಸುವದಿಲ್ಲ.

**ಉದಾಹರಣೆಗಳು—** ೧) 'ಅ' ಎಂಬುವನು ತನ್ನ ಮನೆಯನ್ನು 'ಬ' ಎಂಬುವವನಿಗೆ ಬಕ್ಷೀಸನ್ನಾಗಿ ನೀಡಿ, ಆ ಮನೆಯಲ್ಲಿ ಅತಿಥಿಯಾಗಿ ಇರಹತ್ತಿದನು. ಮುಂದೆ ಎರಡು ವರುಷಗಳನಂತರ 'ಅ' ನು ಮರಣ ಹೊಂದಿದನು. ಈ ಬಕ್ಷೀಸು ಕರಕ್ಕೆ ಪಾತ್ರವಾಗುವದಿಲ್ಲ. ಆದರೆ 'ಅ' ನು ಬಹುಮಾನವನ್ನು ಕೊಡುವ ಮುಂದೆ, ತಾನು ತನ್ನ ಜೀವಮಾನದವರೆಗೆ ಅಥವಾ ಕೆಲವು ಅವಧಿಯವರೆಗೆ ತಾನು ಆ ಮನೆಯಲ್ಲಿ ಇರುವ ಹಕ್ಕನ್ನು ಇಟ್ಟುಕೊಂಡಿದ್ದರೆ, ಆ ಬಕ್ಷೀಸು ಕರಕ್ಕೆ ಪಾತ್ರವಾಗುವದು.

೨) 'ಕ' ಎಂಬವನು 'ಡ' ಎಂಬುವನಿಗೆ ತನ್ನ ಹೊಲವನ್ನು ಬಹುಮಾನವಾಗಿ ಕೊಟ್ಟು, ತಾನು ಜೀವದಿಂದಿರುವವರೆಗೆ, ಲಾವಣಿಯ ಹಣವನ್ನು ತಾನು ಪಡೆಯಬೇಕೆಂದು ವಿಧಿಸಿದ್ದರೆ, ಆ ಬಕ್ಷೀಸು ಕರಕ್ಕೆ ಪಾತ್ರವಾಗುವದು.

೩) 'ಅ' ಎಂಬುವನು 'ಬ' ಎಂಬುವನಿಗೆ ತನ್ನ ಆಸ್ತಿಯ ಕೆಲವು ಭಾಗವನ್ನು ಭಕ್ಷೀಸನ್ನಾಗಿ ಕೊಟ್ಟು, ಆದರ ಬದಲಾಗಿ 'ಬ' ನು 'ಅ'

---

* Re; Oven Vs C. I. R (1949) All E. R. 901.

ನಿಗೆ ಪ್ರತಿವರ್ಷ ಕೆಲವೊಂದು ಹಣವನ್ನು ಕೊಡಬೇಕೆಂದು ವಿಧಿಸಿದ್ದರೆ, ಬಕ್ಷೀಸು ಕರಕ್ಕೆ ಪಾತ್ರವಾಗುವದು.

೪) ಎ. ಜಿ. ವಿರುದ್ಧ ಗ್ರೇ ಪ್ರಕರಣದಲ್ಲಿ, ಮೃತನು ಇನ್ನೊಬ್ಬನಿಗೆ ಬಹುಮಾನವನ್ನು ನೀಡಿ, ಬಹುಮಾನವನ್ನು ಸ್ವೀಕರಿಸಿದವನು ಬಹುಮಾನ ನೀಡಿದವನ ಮನೆತನದ ವೆಚ್ಚವನ್ನು, ಕೆಲವು ವರುಷಗಳವರೆಗಾಗಲಿ ಅಥವಾ ಅವನ ಜೀವಮಾನದವರೆಗಾಗಲೀ ನಿರ್ವಹಿಸಬೇಕೆಂದು ವಿಧಿಸಿದ್ದನು. ಬಹುಮಾನವು ಕರಕ್ಕೆ ಪಾತ್ರವಾಗುವದೆಂದು ಕೋರ್ಟು ನಿರ್ಣಯಿಸಿತು. *

೫) ಎ. ಜಿ ವಿರುದ್ಧ ಜಾನಸನ್ ಪ್ರಕರಣದಲ್ಲಿ, 'ಅ'ನು ಪ್ರತಿವರ್ಷ ೨೫ ಪೌಂಡು ಹಣವನ್ನು ತನಗೆ ಕೊಡಬೇಕೆಂಬ ಕರಾರಿನಿಂದ ೫೦೦ ಪೌಂಡ ಹಣವನ್ನು ಬಹುಮಾನವಾಗಿ ಕೊಟ್ಟನು. ಈ ಹಣವು ಕರಕ್ಕೆ ಪಾತ್ರವಾಗುವದೆಂದು ಕೋರ್ಟು ನಿರ್ಣಯಿಸಿತು†

ಈ ಮೇಲಿನ ಕೋರ್ಟ ನಿರ್ಣಯಗಳನ್ನು ಹಾಗೂ ಉದಾಹರಣೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದರೆ, ಆಸ್ತಿಯ ಯಾವದೇ ಉಪಭೋಗದ ಹಕ್ಕನ್ನು ಬಕ್ಷೀಸನ್ನು ನೀಡಿದವನು ಕಾಯ್ದಿರಿಸಿದ್ದರೆ, ಆ ಬಕ್ಷೀಸಿನ ಆಸ್ತಿಯು ಕರಕ್ಕೆ ಪಾತ್ರವಾಗುವದೆಂದು ಸ್ಪಷ್ಟವಾಗಿ ತಿಳಿಯುತ್ತದೆ. ಆದರೆ ಎಲ್ಲಿ ಆಸ್ತಿಯು ಬೇರೆಬೇರೆಯಾಗಿ ಎರಡು ವಿಧಿಗಳಲ್ಲಿ ಬೇರ್ಪಡೆಯಾಗುವ ಸಂಭವವಿದೆಯೋ, ಅಂತಹ ಸಂದರ್ಭದಲ್ಲಿ ಯಾವದೊಂದು ಆಸ್ತಿಯ ವಿಭಾಗದ ಉಪಭೋಗದ ಹಕ್ಕನ್ನು, ಬಹುಮಾನವನ್ನು ನೀಡಿದವನು ಕಾಯ್ದಿರಿಸಿದ್ದರೆ, ಸಂಪೂರ್ಣ ಆಸ್ತಿಯು

---

* A. G. V. Gray (1900) A. C. 124.

† A G. V. Johnson [1903] I. K. B. 167 [C A.]

ಕರಕ್ಕೆ ಪಾತ್ರವಾಗದೇ, ಕಾಯ್ದಿರಿಸಿದ ವಿಭಾಗವಿಷ್ಟೇ ಕರಕ್ಕೆ ಪಾತ್ರ ವಾಗುವದು. ಉದಾಹರಣೆಗಾಗಿ 'ಅ' ಎಂಬುವವನು ತನ್ನ ಹೊಲ ವನ್ನು 'ಬ' ಎಂಬುವವನಿಗೆ ಬಕ್ಷೀಸನ್ನಾಗಿ ನೀಡಿ, ಆ ಹೊಲದಲ್ಲಿದ್ದ ಮನೆಯನ್ನು ಮಾತ್ರ ತನ್ನ ವಶದಲ್ಲಿ ಇಟ್ಟುಕೊಂಡಿದ್ದರೆ, ಹೊಲದ ಬಹುಮಾನವು ಕರಕ್ಕೆ ಪಾತ್ರವಾಗುವದಿಲ್ಲ. ಈ ಉದಾಹರಣೆಯಲ್ಲಿ 'ಹೊಲ ಹಾಗೂ ಹೊಲದಲ್ಲಿ ಇದ್ದ ಮನೆ' ಇವು 'ಹೊಲ' ಹಾಗು 'ಮನೆ' ಎಂದು ವಿಂಗಡಿಸಲು ಬರಬಹುದಾಗಿದ್ದು, ಹೊಲದ ಬಕ್ಷೀಸಿ ನಲ್ಲಿ ಉಪಭೋಗದ ಹಕ್ಕು, ಬಕ್ಷೀಸು ನೀಡುವವನಿಂದ ಕಾಯ್ದಿರಿಸಲ್ಪ ಟ್ಟಿಲ್ಲವಾದ್ದರಿಂದ ಅದು ಕರಕ್ಕೆ ಪಾತ್ರವಾಗುವದಿಲ್ಲ.

ಎ. ಜಿ. ವಿರುದ್ಧ ಸೆಂ. ಆವಬಿನ್ ಪ್ರಕರಣದಲ್ಲಿ " ಉಪಭೋಗದ ಹಕ್ಕನ್ನು ದಾನಿಯು ಕರಾರಿನ ಮೂಲಕವಾಗಲೀ ಅಥವಾ ಬೇರೆ ರೀತಿಯಾಗಲಿ ಮಾಡಬಹುದಾದರೂ, ನ್ಯಾಯಬದ್ಧವಾಗಿ ಚಲಾಯಿಸುನ ಹಕ್ಕನ್ನು ದಾನಿಯೇ ಪಡೆದಿರಬೇಕೆಂದು" ಕೋರ್ಟು ಅಭಿಪ್ರಾಯವಟ್ಟಿದೆ.* ಕೇವಲ ಬಕ್ಷೀಸು ಕೊಟ್ಟ ಆಸ್ತಿಯ ಉಪಭೋಗವನ್ನು ದಾನಿಯು ತೆಗೆದುಕೊಂಡನೆಂದು ಆ ಆಸ್ತಿಯು ಕರಕ್ಕೆ ಪಾತ್ರವಾಗದು. ಈ ಹಕ್ಕು ನ್ಯಾಯಬದ್ಧವಾಗಿ ಚಲಾಯಿಸಲ್ಪಡುವದೇ ಎಂಬುದನ್ನು ಗಮನಿಸಬೇಕಾಗುವದು.

ವಿ. ಜಿ. ವಿರುದ್ಧ ಸೆಕ್ಕೊಂಬೇ ಪ್ರಕರಣದಲ್ಲಿ ಒಬ್ಬ ಮುಪ್ಪಿನ ಒಕ್ಕಲಿಗನು ತನ್ನ ಮನೆಯನ್ನೂ ಹಾಗೂ ಎಲ್ಲ ಆಸ್ತಿಯನ್ನೂ ತನ್ನ ಸಂಬಂಧಿಕನಿಗೆ ಬಕ್ಷೀಸನ್ನಾಗಿ ಕೊಟ್ಟನು. ಆ ಸಂಬಂಧಿಕನು ಆ ಒಕ್ಕಲಿಗನನ್ನು ತನ್ನಲ್ಲಿಯೇ ಇಟ್ಟುಕೊಂಡು ಅವನ ವೆಚ್ಚವನ್ನು ನಿರ್ವಹಿಸಿದನು. ಒಕ್ಕಲಿಗನು ತನ್ನ ವೆಚ್ಚವನ್ನು ನಿರ್ವಹಿಸುವ ಹೊಣೆ

---

* A. G. V. St. Aubyn (1950) 2. K. B. 249 (C. A.).

ಯನ್ನು ತನ್ನ ಸಂಬಂಧಿಕನು ಹೊರಬೇಕೆಂದು ವಿಧಿಸಿಲ್ಲವಾದ್ದರಿಂದ ಆ ಹಕ್ಕನ್ನು ಚಲಾಯಿಸಲು ಆತನು ಅರ್ಹನಾಗಿರಲಿಲ್ಲವಾದ್ದರಿಂದ ಆ ಆಸ್ತಿಯು ಕರಕ್ಕೆಪಾತ್ರವಾಗಲಾರದೆಂದು ಕೋರ್ಟು ನಿರ್ಣಯಿ-ಸಿತು †

ಆದರೆ ಒಂದು ಮಹತ್ವದ ಅಂಶವನ್ನು ನಾವು ಇಲ್ಲಿ ಗಮನಿಸ ಬೇಕಾಗುವದು. ಓರ್ವನು ಆಸ್ತಿ ಉಪಭೋಗದ ಹಕ್ಕನ್ನು ಕಾಯ್ದಿರಿಸಿ ಬಕ್ಷೀಸನ್ನು ಕೊಟ್ಟು, ಮುಂದೆ ತನ್ನ ಉಪಭೋಗದ ಹಕ್ಕನ್ನು ಬಿಟ್ಟು ಕೊಟ್ಟರೆ, ಉಪಭೋಗದ ಹಕ್ಕನ್ನು ಬಿಟ್ಟುಕೊಟ್ಟನಂತರ ಎರಡು ವರುಷಗಳು ಸಂದಿದ್ದರೆ, ಆ ಬಕ್ಷೀಸು ಕರಕ್ಕೆ ಪಾತ್ರವಾಗುವದಿಲ್ಲ. ಉದಾಹರಣೆಗಾಗಿ: 'ಅ' ಎಂಬುವನು ೧೯೪೪ ರಲ್ಲಿ 'ಬ' ಎಂಬವನಿಗೆ ತನ್ನ ಆಸ್ತಿಯನ್ನು ಬಹುಮಾನವಾಗಿ ಕೊಟ್ಟು, ತನ್ನ ಜೀವಮಾನದವರೆಗೆ 'ಬ' ನು ತನಗೆ ವರ್ಷಾಶನವನ್ನು ಕೊಡಬೇಕೆಂದು ವಿಧಿಸಿದ್ದನು. ಮುಂದೆ ೧೯೫೧ ಅಕ್ಟೋಬರ ೧೦ ರಂದು, ಕಾಯ್ದಿರಿಸಿದ ಈ ತನ್ನ ಉಪಭೋಗದ ಹಕ್ಕನ್ನು ಬಿಟ್ಟುಕೊಟ್ಟನು. ಮುಂದೆ ೧೯೫೩ ಅಕ್ಟೋಬರ ೨೦ ರಂದು 'ಅ' ನು ಮರಣ ಹೊಂದಿದನು. ಬಕ್ಷೀಸನ್ನಾಗಿ ಕೊಟ್ಟ ಆಸ್ತಿಯು ಕರಕ್ಕೆ ಪಾತ್ರವಾಗುವದಿಲ್ಲ. ಮೊದಲಿಗೆ ಮೃತನು ಉಪಭೋಗದ ಹಕ್ಕನ್ನು ಕಾಯ್ದಿರಿಸಿದ್ದರೂ, ಮುಂದೆ ತನ್ನ ಮರಣದ ಪೂರ್ವದಲ್ಲಿ ಎರಡು ವರುಷಗಳ ಮುಂಚೆ ತನ್ನ ಹಕ್ಕನ್ನು ಬಿಟ್ಟುಕೊಟ್ಟದ್ದರಿಂದ, ಈ ಬಕ್ಷೀಸು ಕರಕ್ಕೆ ಪಾತ್ರವಾಗುವದಿಲ್ಲ.

## ೪. ನಿಯಮಿತ ಆಸ್ಥೆಯನ್ನು ಬಿಟ್ಟುಕೊಡೋಣ.

ಮೃತನ ಆಸ್ತಿಯ ಮೇಲೆ ಆಸ್ಥೆ ಇದ್ದರೆ, ಅವನ ಮರಣಾನಂತರ ಆ ಆಸ್ಥೆಯು ೫ನೇ ಕಲಮಿನನ್ವಯ ಕರಕ್ಕೆಗುರಿಯಾಗುವದು. ಮೃತನ

† A. G. V. Seccombe [1911] 2. K. B. 688.

ಮರಣಾನಂತರ ಆಸ್ತಿಯು ಲೋಪ ಹೊಂದಿದರೆ, ಕಲಮು ೭ರನ್ವಯ ಕರಕ್ಕೆ ಗುರಿಯಾಗುವದು. ಆದರೆ ನಿಯಮಿತ ಆಸ್ಥೆಯನ್ನು ಬಿಟ್ಟು ಕೊಟ್ಟಂತಹ ಪ್ರಕರಣಗಳು ೧೧ನೇ ಕಲಮಿಗೆ ಗುರಿಯಾಗುವವು. ಕಲಮು ೫ ಅಥವಾ ೭ ರಲ್ಲಿ ವಿವರಿಸಿದಂತೆ ಆಸ್ತಿಯ ಮೇಲಿದ್ದ ಆಸ್ಥೆಯನ್ನು ಮೃತನು ತನ್ನ ಮರಣದ ಪೂರ್ವದಲ್ಲಿ ಎರಡು ವರ್ಷ ಮೊದಲಿಗೆ ಬಿಟ್ಟುಕೊಟ್ಟಿದ್ದರೆ, ಆ ಆಸ್ಥೆಯು ಕರಕ್ಕೆ ಪಾತ್ರವಾಗುವದಿಲ್ಲ ಉದಾಹರಣೆಗಾಗಿ 'ಅ' ಎಂಬುವವನು ಒಂದು ಆಸ್ತಿಯ ಮೇಲಿದ್ದ ೫೦೦ ರೂ ವರ್ಷಾಶನದ ಆಸ್ಥೆಯನ್ನು, ಇನ್ನೊಂದು ಆಸ್ತಿಯ ವರ್ಷಾಶನಕ್ಕೆ ವರ್ಗಾಯಿಸಿ, ಎರಡು ವರುಷಗಳನಂತರ ತೀರಿಕೊಂಡರೆ, ಮೊದಲನೆಯ ಆಸ್ತಿಯ ಮೇಲಿದ್ದಆಸ್ಥೆಯು ಕರಕ್ಕೆಪಾತ್ರವಾಗುವದಿಲ್ಲ

# ಪ್ರಕರಣ ೪.



## ೧) ಸಂಯುಕ್ತ ಆಸ್ತಿಗಳು

ಮೃತನಿಂದ ಅಥವಾ ಮೃತನ ಹಿತಕ್ಕಾಗಿ ಬೇರೆಯವರಿಂದ, ಮೃತನ ಸಹಿತವಾಗಿ ಒಂದಕ್ಕಿಂತಲೂ ಹೆಚ್ಚು ಹೆಸರಿನಮೇಲೆ ಆಸ್ತಿಯನ್ನು ಇಟ್ಟಿದ್ದರೆ ಅದನ್ನು "ಸಂಯುಕ್ತ ಆಸ್ತಿ" ಅಥವಾ "ಸಂಯುಕ್ತ ಭಂಡವಲ" ( Joint Investment ) ವೆಂದು ಕರೆಯಲಾಗುವದು.

ಉದಾಹರಣೆ:- 'ಅ' ಎಂಬುವವನು ತನ್ನ ಆಸ್ತಿಯನ್ನು 'ಅ' ಮತ್ತು 'ಬ' ಇವರ ಹೆಸರಿನಲ್ಲಿ ಇಟ್ಟು, ಆ ಆಸ್ತಿಯ ಉತ್ಪನ್ನವನ್ನು 'ಅ'ನು ತನ್ನ ಜೀವಮಾನದವರೆಗೆ ಉಪಭೋಗಿಸಬೇಕೆಂದೂ, ಮತ್ತು ಅವನ ಮರಣದ ನಂತರ ಆ ಉತ್ಪನ್ನವು ೭೫% 'ಅ' ನ ವಾರಸದಾರರಿಗೂ ೨೫% 'ಬ'ನಿಗೂ ಸಿಗಬೇಕೆಂದು ವಿಧಿಸಿದ್ದರೆ

i ) 'ಅ'ನ ಮರಣದನಂತರ ಎಲ್ಲ ಆಸ್ತಿಗೂ ಕರವು ಅನ್ವಸುವದು.

ii ) 'ಬ'ನು 'ಅ'ನಿಗಿಂತಲೂ ಮೊದಲು ತೀರಿಕೊಂಡರೆ ಕರವು ಅನ್ವಯಿಸುವದಿಲ್ಲ.

ಯಾಕಂದರೆ ಆಸ್ತಿಯು ಕೇವಲ ಹೆಸರಿನಲ್ಲಿ ಇಬ್ಬರ ನಾನೆಯಲ್ಲಿ ಇದ್ದರೂ 'ಅ'ನ ಜೀವಮಾನದವರೆಗೆ ಅದು 'ಅ'ನ ಆಸ್ತಿಯಾಗಿದ್ದು, 'ಬ'ನು ಕೇವಲ ಹೆಸರಿಗೆ ಭಾಗೀದಾರನಾಗಿದ್ದಾನೆ.

ಉದಾಹರಣೆ ೨ :– 'ಅ'ನು ತನ್ನ ಆಸ್ತಿಯನ್ನು 'ಅ'ಮತ್ತು 'ಬ' ಇವರ ಹೆಸರಿನಲ್ಲಿ ಇಟ್ಟು, ಅದರ ಉತ್ಪನ್ನವನ್ನು ಶೇಕಡಾ ೭೫ ರಷ್ಟು 'ಅ'ನೂ, ಶೇಕಡಾ ೨೫ ರಷ್ಟು 'ಬ'ನೂ ಉಪಭೋಗಿಸಬೇಕೆಂದು ವಿಧಿಸಿದ್ದರೆ –

i ) 'ಅ'ನು ಮರಣ ಹೊಂದಿದರೆ, ಸಂಪೂರ್ಣ ಆಸ್ತಿಯ ಮೇಲೆ ಕರವನ್ನು ಹೇರಲಾಗುವದು. ಯಾಕಂದರೆ ಆ ಆಸ್ತಿಯು ಸಂಪೂರ್ಣವಾಗಿ 'ಅ'ನದಿದ್ದು ಕೇವಲ ಇಬ್ಬರ ಹೆಸರಿನಲ್ಲಿ ಮಾಡಿದ್ದಾನೆ.

ii ) 'ಅ'ನಿಗಿಂತಲೂ 'ಬ'ನು ಮೊದಲು ಮರಣ ಹೊಂದಿದರೆ, 'ಬ'ನ ಶೇಕಡ ೨೫ ಆಸ್ತಿಯಮೇಲೆ ಕರವನ್ನು ಹೇರಲಾಗುವದು.

ಉದಾಹರಣೆ ೩ :– 'ಅ' ಮತ್ತು 'ಬ' ಇಬ್ಬರೂ ಒಂದು ಆಸ್ತಿಯನ್ನು ಕೊಂಡು, ಅದರ ಉತ್ಪನ್ನವನ್ನು 'ಅ'ನು ಶೇಕಡಾ ೭೫ ರಷ್ಟೂ, 'ಬ'ನೂ ಶೇಕಡಾ ೨೫ ರಷ್ಟೂ ಹಂಚಿಕೊಳ್ಳಬೇಕೆಂದೂ ಒಡಂಬಡಿಕೆ ಮಾಡಿಕೊಂಡಿದ್ದರೆ-

i ) 'ಅ'ನು ಮರಣಹೊಂದಿದರೆ, ಶೇಕಡಾ ೭೫ ರಷ್ಟು ಆಸ್ತಿಯಮೇಲೆ ಕರವನ್ನು ಹೇರಲಾಗುವದು.

ii ) 'ಬ'ನು ಮರಣಹೊಂದಿದರೆ ಶೇಕಡಾ ೨೫ ರಷ್ಟು ಆಸ್ತಿಯಮೇಲೆ ಕರಹೇರಲಾಗುವದು.

ಉದಾಹರಣೆ ೪ :– 'ಅ' ಎಂಬುವವನು ತನ್ನ ಆಸ್ತಿಯನ್ನು ತನ್ನ ಹಾಗೂ 'ಬ'ನ ಹೆಸರಿನಲ್ಲಿ ಇಟ್ಟು, 'ಅ'ನ ಮರಣದನಂತರ ತನ್ನ ಹಿಸೆಯೂ 'ಬ'ನಿಗೆ ಹೋಗಬೇಕೆಂದೂ ಅಥವಾ 'ಬ'ನ ಮರಣದ ನಂತರ ಅವನ ಆಸ್ತಿಯು ತನಗೆ ಬರಬೇಕೆಂದೂ ವಿಧಿಸಿದ್ದರೆ-

i ) 'ಅ'ನ ಮರಣದ ತರುವಾಯ ಎಲ್ಲ ಆಸ್ತಿಯು ಕರಕ್ಕೆ ಪಾತ್ರವದು.

ii ) 'ಅ'ನಿಗಿಂತಲೂ 'ಬ'ನು ಮೊದಲಿಗೆ ಮರಣಹೊಂದಿದರೆ ಎಲ್ಲ ಆಸ್ತಿಯೂ ಕರಕ್ಕೆ ಪಾತ್ರವಾಗುವದು.

ಯಾಕಂದರೆ ಇಂತಹ ಸಂಯುಕ್ತ ಆಸ್ತಿಗಳು ( Jus - accrescendi ) ಒಬ್ಬ ಭಾಗೀದಾರನಿಂದ ಇನ್ನೊಬ್ಬರಿಗೆ ಹಸ್ತಾಂತರವಾಗುವದು.

## ೨) ಇನ್ಸೂರನ್ಸ ಪಾಲಿಸಿ ( ವಿಮಾ ಪಾಲಿಸಿ )

ಆಸ್ತಿಕರ ಕಾನೂನಿನ ೧೪ ನೇ ಕಲಮು, ವಿಮಾ ಪಾಲಿಸಿಯನ್ನು ಮೃತನು ಹಸ್ತಾಂತರ ಮಾಡುವದರಿಂದುಂಟಾಗಬಹುದಾದ ಆಸ್ತಿಯ ಬಗ್ಗೆ ಸ್ಪಷ್ಟೀಕರಣ ನೀಡುತ್ತದೆ. ಈ ವಿಮಾ ಪಾಲಿಸಿಯು-

i ) ಮೃತನ ಜೀವವಿಮೆಯಾಗಿರಬೇಕು.

ii ) ಪಾಲಿಸಿಯು ಅವನಿಂದಲೇ ರೂಪಗೊಂಡಿರಬೇಕು. ( Effected )

iii ) ಈ ಪಾಲಿಸಿಯನ್ನು, ಬಕ್ಷೀಸು ತೆಗೆದುಕೊಳ್ಳುವವನ ಹಿತಕ್ಕಾಗಿ ತೆಗೆದಿಟ್ಟಿರಬೇಕು. ಯಾವ ಮನುಷ್ಯನು, ವಿಮಾ ಕಂಪನಿಯ ಕಾಗದ ಪತ್ರಗಳಿಗೆ ( Proposal Form of the Insurance Company ) ಸಹಿ ಮಾಡುವನೋ, ಆ ವಿಮಾ ಪಾಲಿಸಿಯು ಅವನಿಂದ ರೂಪಗೊಂಡಿದೆ ಎಂದು ಹೇಳಬಹುದು. ಅವನು ವಿಮಾ ಹಣದ ಮೊದಲನೆಯ ಕಂತನ್ನು ಕೊಟ್ಟಿರಲಿ ಅಥವಾ ಕೊಡದಿರಲಿ ಅದನ್ನು ಗಣನೆಗೆ ತರಲಾಗುವದಿಲ್ಲ.

ಯಾವ ಮನುಷ್ಯನು, ಕಾಲಕಾಲಕ್ಕೆ ವಿಮಾ ಹಣದ ಕಂತುಗಳನ್ನು ಸ್ವತಃ ತಾನೇ ಆಗಲಿ ಅಥವಾ ತನ್ನ ಎಜಂಟನ ಮೂಲ

ಕವಾಗಲಿ ( ಬ್ಯಾಂಕರ ಇತ್ಯಾದಿ ) ಮುಟ್ಟಿಸುತ್ತಾನೋ, ಅವನು ಪಾಲಿಸಿಯನ್ನು ಇಟ್ಟುಕೊಂಡವನೆಂದು ಕರೆಯಲಾಗುವದು (Kept up by the person )

ಇನ್ಶೂರನ್ಸ್ ಪಾಲಿಸಿಗಳನ್ನು ಎರಡು ವಿಧಗಳನ್ನಾಗಿ ವಿಂಗಡಿಸಬಹುದಾಗಿದೆ ಃ-

i ) ಪಾಲಿಸಿಯನ್ನು ಮೃತನ ಹೆಸರಿನಿಂದಲೇ ತೆಗೆದುಕೊಂಡಿರಬಹುದು.

ii ) ಪಾಲಿಸಿಯನ್ನು ಬೇರೆಯವರಿಗೆ ಬಕ್ಷೀಸನ್ನಾಗಿ ನೀಡುವದಕ್ಕಾಗಿ ( Donee ) ತೆಗೆದುಕೊಂಡಿರಬಹುದು.

ಮೊದಲಿಗೆ ಹೇಳಿದಂತೆ ಪಾಲಿಸಿಯನ್ನು ಮೃತನ ಹೆಸರಿನಿಂದ ತೆಗೆದುಕೊಂಡಿದ್ದರೆ, ಆರನೇ ಕಲಮಿನನ್ವಯ, ಅದು ಮೃತನ ಆಸ್ತಿಯಾಗಿ ಕರಕ್ಕೆ ಪಾತ್ರವಾಗುವದು. ಆದರೆ ಬೇರೆಯವರ ಹಿತಕ್ಕಾಗಿ ಪಾಲಿಸಿಯನ್ನು ಮೃತನು ಕೊಂಡುಕೊಂಡಿದ್ದರೆ, ಅದು ಈ ಕಲಮಿನನ್ವಯ ಆಕರಣೆಗೆ ಪಾತ್ರವಾಗುವದು.

೧) ಪ್ರಾರಂಭದಿಂದಲೇ ಮೃತನು ಬೇರೆಯವರ ಹಿತಕ್ಕಾಗಿ ಪಾಲಿಸಿಗಳನ್ನು ಕೊಂಡಿದ್ದರೆ, ಒಟ್ಟು ವಿಮಾ ಹಣದಲ್ಲಿ, ಮೃತನು ಒಟ್ಟು ಕೊಟ್ಟ ವಿಮಾ ಕಂತುಗಳ ಪ್ರಮಾಣದನ್ವಯ ಆಕರಣೆ ಮಾಡಲಾಗುವದು.

ಉದಾಹರಣೆಗಾಗಿ: 'ಅ' ಎಂಬವನು 'ಬ'ನಿಗಾಗಿ ವಿಮೆ ಇಳಿಸಿ, ಒಟ್ಟು ಇದ್ದ ೨೫ ಕಂತುಗಳಲ್ಲಿ ೧೦ ಕಂತುಗಳನ್ನು ಕೊಟ್ಟು ಮರಣ ಹೊಂದಿದನು. ಒಟ್ಟು ವಿಮಾ ಹಣದ $\frac{೧೦}{೨೫}$ ಭಾಗವನ್ನು 'ಅ'ನ ಆಸ್ತಿಯೆಂದು ಗ್ರಹಿಸಲಾಗುವದು.

ಆದರಂತೆಯೇ ಪ್ರಾರಂಭದಲ್ಲಿ ಮೃತನು ತನ್ನ ಹೆಸರಿನಲ್ಲಿ ವಿಮೆ ಇಳಿಸಿ, ಮುಂದೆ ಇನ್ನೊಬ್ಬರ ಹಿತಕ್ಕಾಗಿ ಅದನ್ನು ಬದಲಾಯಿಸಿದರೆ, ಬದಲಾವಣೆಯಾದಂದಿನಿಂದ ಮೃತನು ಕೊಟ್ಟ ಕಂತುಗಳ ಪ್ರಮಾಣದ ಮೇಲೆ ಆಸ್ತಿಯ ಬೆಲೆಯನ್ನು ತೆಗೆಯಲಾಗುವದು.

ಉದಾಹರಣೆಗಾಗಿ: 'ಅ' ಎಂಬವನು ತನ್ನ ಹೆಸರಿನ ಮೇಲೆ ರೂ. ೩೦,೦೦೦ಕ್ಕೆ ಜೀವ ವಿಮೆ ಇಳಿಸಿ ೧೦ ಕಂತುಗಳನ್ನು ಕೊಟ್ಟನು. ತದನಂತರ ಅದನ್ನು 'ಬ' ನ ಹೆಸರಿಗೆ ಬದಲಾಯಿಸಿ ಮುಂದೆ ಉಳಿದ ೧೨ ಕಂತುಗಳಲ್ಲಿ ೪ ಕಂತುಗಳನ್ನು 'ಅ' ನು ತುಂಬಿದನು. ಅಂದರೆ ಬದಲಾವಣೆಯಾದನಂತರ 'ಅ' ನು ಉಳಿದ ಒಟ್ಟು ಕಂತುಗಳಲ್ಲಿ ೪/೨೨ ಕಂತುಗಳನ್ನು ತುಂಬಿದ್ದರಿಂದ ವಿಮಾ ಹಣದ ೪/೨೨ ಭಾಗವು 'ಅ' ನ ಮರಣದಂದು ಕರಕ್ಕೆ ಪಾತ್ರವಾಗುವದು.

ಅದರಂತೆಯೇ, 'ಅ' ಎಂಬವನು ತನ್ನ ಹೆಸರಿನ ಮೇಲೆ ರೂ. ೧೦,೦೦೦ ಗಳಿಗೆ ಜೀವ ವಿಮೆಯನ್ನು ಇಳಿಸಿ ಒಟ್ಟು ಇದ್ದ ೨೦ ಕಂತುಗಳಲ್ಲಿ ೧೦ ಕಂತುಗಳನ್ನು ತುಂಬಿ ಆ ವಿಮಾ ಪಾಲಿಸಿಯನ್ನು 'ಬ' ನ ಹೆಸರಿಗೆ ಬದಲಾಯಿಸಿದನು. ಮುಂದೆ ೫ ಕಂತುಗಳನ್ನು 'ಅ' ನು ತುಂಬಿ ಮರಣಹೊಂದಿದನು. ಬದಲಾವಣೆಯಾದ ನಂತರ ಉಳಿದ ೧೦ ಕಂತುಗಳಲ್ಲಿ ೫ ಕಂತುಗಳನ್ನು 'ಅ' ನು ತುಂಬಿದ್ದರಿಂದ ಒಟ್ಟು ವಿಮಾ ಹಣದ ೫/೧೦ ದಷ್ಟು ಅಂದರೆ ೫,೦೦೦ ರೂ. ಕರಕ್ಕೆ ಪಾತ್ರವಾಗುವವು. ಬದಲಾವಣೆಯಾಗುವ ಪೂರ್ವದಲ್ಲಿ ಎಷ್ಟೇ ಕಂತುಗಳನ್ನು ತುಂಬಿರಲಿ ಗಣನೆಗೆ ತೆಗೆದುಕೊಳ್ಳಲಾಗುವದಿಲ್ಲ.

ಇಲ್ಲಿ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. 'ಅ' ಎಂಬವನು ೨೦,೦೦೦ ರೂ. ತನ್ನ ಜೀವವಿಮೆಯನ್ನು ಇಳಿಸಿ ೧೦ ಕಂತುಗಳನ್ನು ತುಂಬಿದನು. ತದನಂತರ ತನ್ನ ಪಾಲಿಸಿಯನ್ನು 'ಬ' ನ

ಹೆಸರಿನಿಂದ ಬದಲಾಯಿಸಿದನು. ಈ ಬದಲಾವಣೆ ಆದ ನಂತರ 'ಬ'ನು ವಿಮಾ ಕಂಪನಿಯಿಂದ ಹಿಂದೆ ತುಂಬಿದ ಕಂತುಗಳ ಆಧಾರದ ಮೇಲೆ ೨,೦೦೦ ಮುಂಗಡ ಹಣವನ್ನು ತೆಗೆದುಕೊಂಡು ಉಳಿದ ಹತ್ತು ಕಂತು ಗಳಲ್ಲಿ ೨ ಕಂತುಗಳನ್ನು ತುಂಬಿದನು. ಮುಂದೆ ಮತ್ತೆ 'ಅ' ನು ೪ ಕಂತುಗಳನ್ನು ತುಂಬಿ ಮೃತಪಟ್ಟನು. ಪಾಲಿಸಿ ಮೇಲಿನ ಎಷ್ಟು ಹಣ ಕರಕ್ಕೆ ಪಾತ್ರವಾಗುವದು.

'ಅ'ನು ೧೦ ಕಂತುಗಳನ್ನು ತುಂಬಿದ ನಂತರ ಅದನ್ನು 'ಬ' ನ ಹೆಸರಿಗೆ ಬದಲಾಯಿಸಿದನು. ಉಳಿದ ೧೦ ಕಂತುಗಳಲ್ಲಿ

೧) ೨ ಕಂತುಗಳನ್ನು ಕಂಪನಿಯಿಂದ ಮುಂಗಡ ತೆಗೆದು ಕೊಂಡು 'ಬ'ನು ತುಂಬಿದನು.

೨) 'ಅ'ನು ೪ ಕಂತುಗಳನ್ನು ತುಂಬಿದನು.

೩) ೪ ಕಂತುಗಳನ್ನು 'ಬ'ನು ತುಂಬಿದನು.

೧) ಒಂದು ವೇಳೆ ಕಂಪನಿಯಿಂದ ಮುಂಗಡ ತೆಗೆದುಕೊಂಡ ಹಣವನ್ನು 'ಅ'ನು ಮುಟ್ಟಿಸಿದರೆ ಬದಲಾವಣೆಯಾದಂದಿನಿಂದ 'ಅ'ನು ೬ ಕಂತುಗಳನ್ನೂ, 'ಬ'ನು ೪ ಕಂತುಗಳನ್ನೂ ಕೊಟ್ಟಂತಾಗುವದು. ಆದ್ದರಿಂದ ವಿಮಾ ಹಣದ ೬/೧೦ ಭಾಗವು 'ಅ'ನ ಮರಣಾನಂತರ ಕರಕ್ಕೆ ಪಾತ್ರವಾಗುವದು.

೨) ಒಂದು ವೇಳೆ ಕಂಪನಿಯಿಂದ ಎಡ್ವಾನ್ಸ ತೆಗೆದುಕೊಂಡ ಹಣವನ್ನು 'ಬ'ನು ಮುಟ್ಟಿಸಿದರೆ,ಬದಲಾವಣೆಯಾದಂದಿನಿಂದ 'ಅ'ನು ೪ ಕಂತುಗಳನ್ನೂ, 'ಬ'ನು ೬ ಕಂತುಗಳನ್ನೂ ತುಂಬಿದಂತಾಯಿತು. ಆದ್ದರಿಂದ 'ಅ'ನ ಮರಣಾನಂತರ ವಿಮಾ ಹಣದ ೪/೧೦ ಭಾಗವು ಕರಕ್ಕೆ ಪಾತ್ರವಾಗುವದು.

೩) ಒಂದು ವೇಳೆ ಕಂಪನಿಯಿಂದ ಎಡ್ವಾನ್ಸ ತೆಗೆದುಕೊಂಡ ಹಣವನ್ನು 'ಅ'ನಾಗಲಿ ಅಥವಾ 'ಬ'ನಾಗಲಿ ತಿರುಗಿ ಕಂಪನಿಗೆ ಮುಟ್ಟಿಸದೆ ಇದ್ದರೆ ಒಟ್ಟು ಬೆಲೆಯಲ್ಲಿ ಅಂದರೆ ೨೦,೦೦೦ ರೂ. ಗಳಲ್ಲಿ ಈ ಎಡ್ವಾನ್ಸ ಹಣವನ್ನೂ, ಹಾಗೂ ಅದರ ಬಡ್ಡಿಯನ್ನೂ ಕಳೆದು 'ಅ' ಹಾಗೂ 'ಬ' ಇವರು ಬದಲಾವಣೆಯಾದ ನಂತರ ತುಂಬಿದ ಕಂತುಗಳ ಪ್ರಮಾಣದ ಮೇಲೆ ಹಂಚಲಾಗುವದು. ಅಂದರೆ 'ಅ'ನ ಮರಣಾನಂತರ (೨೦,೦೦೦–೨೦೦೦+ಅದರ ಬಡ್ಡಿ) ಇದರ ೧/೨ ಭಾಗವು ಕರಕ್ಕೆ ಪಾತ್ರವಾಗುವದು.

## ೩. ವರ್ಷಾಶನ ಅಥವಾ ಇನ್ನಿತರ ಆಸ್ಥಿಗಳು—(Other interests)

ಭಾರತೀಯ ಆಸ್ತಿಕರದ ೧೫ ಮತ್ತು ೧೬ ಕಲಮುಗಳಲ್ಲಿ ವರ್ಷಾಶನ ಅಥವಾ ಇನ್ನಿತರ ಆಸ್ಥಿಗಳ ಬಗೆಗೆ ಸ್ಪಷ್ಟೀಕರಣವನ್ನು ಕೊಡಲಾಗಿದೆ. ಆಸ್ತಿಕರವನ್ನು ತಪ್ಪಿಸುವ ಅನೇಕ ಮಾರ್ಗಗಳಲ್ಲಿ, ವರ್ಷಾಶನಗಳನ್ನು ಕೊಂಡುಕೊಳ್ಳುವದೂ ಇದ್ದು, ಇಂತಹ ಮಾರ್ಗಗಳನ್ನು ತಡೆಗಟ್ಟಲು, ೧೫ ಹಾಗೂ ೧೬ ಕಲಮುಗಳಲ್ಲಿ ವಿಶೇಷ ಏರ್ಪಾಡುಗಳನ್ನು ಮಾಡಲಾಗಿದೆ.

ಆಸ್ತಿಕರ ಕಾನೂನು (೧೯೫೩) ನೆಯ ಕಲಮು ೧೫ರ ನ್ವಯ ಯಾವದೇ ವರ್ಷಾಶನ ಅಥವಾ ಇನ್ನಿತರ ಆಸ್ಥಿಗಳನ್ನು ಮೃತನು ಕೊಂಡುಕೊಂಡಿದ್ದರೆ ಅಥವಾ ವಿಶೇಷ ವ್ಯವಸ್ಥೆಗಳನ್ನು ಮಾಡಿದ್ದರೆ, ಅವನ ಮರಣಾನಂತರ ಅವು ಕರಕ್ಕೆ ಪಾತ್ರವಾಗುವವು.

ಇಂತಹ ವರ್ಷಾಶನ ಅಥವಾ ಆಸ್ಥಿಗಳಲ್ಲಿ ಕೆಳಗೆ ಕಾಣಿಸಿದ ಎರಡು ಅಂಶಗಳು ಇರಬೇಕಾಗುವವು.

i) ಮೃತನು ತಾನೊಬ್ಬನೆ ಆಗಲಿ ಅಥವಾ ಇನ್ನಿತರ ಕೆಲವು ವ್ಯಕ್ತಿಗಳನ್ನು ಕೂಡಿಕೊಂಡಾಗಲೀ, ವರುಷಾಶನ ಅಥವಾ ಆಸ್ತಿಗಳನ್ನು ಕೊಂಡಿರಬೇಕು. ಅಥವಾ ಅವಕ್ಕಾಗಿ ವ್ಯವಸ್ಥೆ ಮಾಡಿರಬೇಕು

ii) ಈ ವರ್ಷಾಶನ ಅಥವಾ ಆಸ್ಥಿಗಳ ಉಪಭೋಗದ ಹಕ್ಕು ಮೃತನಮರಣದಿಂದ ಉಂಟಾಗಿರಬೇಕು ಉದಾಹರಣೆಗಾಗಿ'ಅ'ಎಂಬು ವವನು 'ಬ' ಮತ್ತು 'ರ'ನನ್ನು ಕೂಡಿಕೊಂಡು ಒಂದು ಪಾಲುಗಾರಿಕೆ (Partnership) ಸ್ಥಾಪಿಸಿದ್ದು, ಅದರಲ್ಲಿ ಯಾವನೊಬ್ಬ ಭಾಗೀ ದಾರನು ತೀರಿಕೊಂಡರೆ, ಮೃತನ ಹೆಂಡತಿಗೆ ವರುಷಕ್ಕೆ ೫೦೦ ರೂಪಾ ಯಿಗಳಂತೆ ವರ್ಷಾಶನವನ್ನು ನೀಡಬೇಕೆಂದು ಕರಾರು ಮಾಡಿಕೊಳ್ಳ ಲ್ಪಟ್ಟಿತು. 'ಅ' ನು ತೀರಿಕೊಂಡನಂತರ ಅವನ ಹೆಂಡತಿಯು ಈ ವರ್ಷಾಶನಕ್ಕೆ ಅರ್ಹಳಾಗುವಳು.

ಅದರಂತೆಯೇ 'ರ' ಎಂಬುವವನು 'ಜ' ಎಂಬ ತನ್ನ ಜವಾ ನನಿಗೆ, ತನ್ನ ಮರಣದನಂತರ ೧೦,೦೦೦ ರೂಪಾಯಿಗಳನ್ನು ಕೊಡ ಬೇಕೆಂದು ಒಂದು ಇನ್ಸೂರನ್ಸ ಕಂಪನಿಯೊಂದಿಗೆ ಕರಾರು ಮಾಡಿ ಕೊಂಡಿದ್ದಾನೆ.

ಮೇಲಿನ ಎರಡೂ ಉದಾಹರಣೆಗಳಲ್ಲಿ, ಮೇಲೆ ನಮೂದಿಸಿದ ಎರಡು ಮಹತ್ವದ ಅಂಶಗಳಿವೆ. ಮೊದಲನೆಯದಾಗಿ ವರ್ಷಾಶನ ಅಥವಾ ವಿಶೇಷ ಆಸ್ಥಿಗಳನ್ನು ಮೃತನು ತಾನೊಬ್ಬನೇ ಆಗಲೀ ಅಥವಾ ಇನ್ನಿತರ ಕೆಲವು ಜನರನ್ನು ಕೂಡಿಕೊಂಡಾಗಲೀ, ಏರ್ಪಾಟು ಮಾಡಿದ್ದಾನೆ. ಈ ವರುಷಾಶನ ಮತ್ತು ಆಸ್ಥಿಯು ಮೃತನ ಮರಣ ದಿಂದಲೇ ಉಂಟಾಗಿವೆ.

ಆದ್ದರಿಂದ ಮೇಲಿನ ಎರಡೂ ಉದಾಹರಣೆಗಳಲ್ಲಿ ಅವು ಕರ ವನ್ನು ಆಕರ್ಷಿಸುವವು. ಆದರೆ ಮೇಲೆ ವಿವರಿಸಿದ ವರ್ಷಾಶನ ಅಥವಾ

ಆಸ್ತಿಗಳ ಉಪಭೋಗದ ಹಕ್ಕು ಕಾನೂನಿನಿಂದ ಚಲಾವಣೆಯಾಗು ವಂತಹದಿರಬೇಕು. ಅಂದರೆ ಮೃತನು ಇಂತಹ ಹಕ್ಕುಗಳಿಗಾಗಿ ಲೇಖಿಯಿಂದಾಗಲಿ ಅಥವಾ ತೋಂಡಿಯಿಂದಾಗಲಿ ಕರಾರನ್ನು ಮಾಡಿ ಕೊಂಡಿರಬೇಕು ಉಪಭೋಗದ ಹಕ್ಕು (Beneficial Interest) ಕಾನೂನಿನಿಂದ ಚಲಾವಣೆಯಾಗದ (Legally enforceable) ಹೊರತು ಆಸ್ತಿಕರದ ೧೫ ನೇ ಕಲಮು ಅನ್ವಯಿಸುವದಿಲ್ಲ. ಉದಾಹರಣೆಗಾಗಿ ಅ ಎಂಬುವವನು, 'ಬ' ಎಂಬ ತನ್ನ ಸೇವಕನು ಮರಣ ಹೊಂದಿದ್ದರಿಂದ ಅವನು ತನಗೆ ಹಿಂದೆ ಸಲ್ಲಿಸಿದ ಸೇವೆಯಿಂದ ಪ್ರೇರಿತನಾಗಿ, 'ಬ'ನ ಹೆಂಡತಿಗೆ ೫೦೦ ರೂಪಾಯಿಗಳನ್ನು ಕೊಟ್ಟನು. ಈ ಆಸ್ತಿಯು 'ಬ'ನ ಮರಣದಿಂದ ಉಂಟಾದರೂ, ಇದಕ್ಕೆ ಕಾನೂನಿನ ಚಲಾವಣೆ ಇಲ್ಲದಿರುವದರಿಂದ ಇದು ಕರಕ್ಕೆ ಪಾತ್ರವಾಗುವದಿಲ್ಲ.

೧೬ ನೇ ಕಲಮಿನಲ್ಲಿಯೂ ಆಸ್ತಿಕರವನ್ನು ತಪ್ಪಿಸುವದರ ಬಗ್ಗೆ ಮುಂಜಾಗ್ರತೆಗಳನ್ನು ಕೈಕೊಳ್ಳಲಾಗಿದೆ. ಮೇಲೆ ವಿವರಿಸಿದ ವರ್ಷಾಶನ ಅಥವಾ ಆಸ್ತಿಗಳನ್ನು ಮೃತನು ಸ್ವತಃ ತಾನು ಮಧ್ಯಸ್ಥಿಕೆ ವಹಿಸಿ ಏರ್ಪಾಟು ಮಾಡದೆ, ಇನ್ನೊಬ್ಬರಿಗೆ ಅವುಗಳ ಸಲಕರಣೆಗಳನ್ನು ನೀಡಿ ತಾನು ಲಾಭ ಪಡೆಯಬಹುದಾಗಿದೆ. ಉದಾಹರಣೆಗಾಗಿ 'ಅ' ಎಂಬುವವನು ತನ್ನ ಮಕ್ಕಳಿಗೆ ೨೫,೦೦೦ ರೂಪಾಯಿಗಳನ್ನು, ಕೊಟ್ಟನು. ಅವನ ಮೂರು ಮಂದಿ ಮಕ್ಕಳು ಒಂದು ಖಾಸಗಿ ನಿಯಮಿತ ಕಂಪನಿಯನ್ನು (Private Limited Company) ಸ್ಥಾಪಿಸಿ, ತನ್ಮೂಲಕ 'ಅ'ನಿಗೆ ೨೫,೦೦೦ ರೂಪಾಯಿಗಳ ಸಾಲವನ್ನು ಕೊಟ್ಟರು. ಮತ್ತು 'ಅ'ನು ಪ್ರತಿವರ್ಷ ಆ ಸಾಲದ ಮೇಲೆ ಕೊಡುವ ಬಡ್ಡಿಯಿಂದ ವಿಮಾಕಂತನ್ನು ತುಂಬುವಂತೆ ಏರ್ಪಾಡು ಮಾಡಿ 'ಅ'ನ ಹೆಸರಿನಿಂದ ಜೀವ ವಿಮೆ ಇಳಿಸಿದರು.

ಮೇಲಿನ ವಿಮಾ ಹಣವು ಕರಕ್ಕೆ ಪಾತ್ರವಾಗುವದೇ ಹೇಗೆ? ಆಸ್ತಿಕರ ಕಾನೂನಿನ ಕಲಮು ಆರರನ್ವಯ, ಮೃತನು ಯಾವ ಆಸ್ತಿಯ ವಿಲೇವಾಟಣೆ ಮಾಡಲು ಅರ್ಹನಾಗುವನೋ ಆ ಆಸ್ತಿಯು ಕರಕ್ಕೆ ಪಾತ್ರವಾಗುವದಿದ್ದು, ಆರನೇ ಕಲಮು ಇದಕ್ಕೆ ಅನ್ವಯಿಸುವದಿಲ್ಲ. ೧೪ ಹಾಗೂ ೧೫ ನೇ ಕಲಮುಗಳೂ ಕೂಡ ಇದಕ್ಕೆ ಅನ್ವಯಿಸುವದಿಲ್ಲ. ಆದರೆ ಹದಿನಾರನೆಯ ಕಲಮಿನನ್ವಯ ಈ ಆಸ್ತಿಯು ಕರಕ್ಕೆ ಪಾತ್ರವಾಗುವದು. ಯಾಕಂದರೆ ವಿಮಾ ಇಳಿಸಿದವರು, ವಿಮಾ ಕಂತುಗಳನ್ನು, ಮೃತನ ಆಸ್ತಿಯನ್ನು ಮೊದಲಿಗೆ ತಮ್ಮ ಸ್ವಾಧೀನ ಪಡಿಸಿಕೊಂಡು ಆದರಿಂದ ತುಂಬಿದ್ದರಿಂದ, ಮೃತನು ಸ್ವತಃ ವಿಮಾ ಕಂತುಗಳನ್ನುತುಂಬಿದಷ್ಟೇ ಸರಿ ಸಮಾನತೆ, ವಿಮಾ ಹಣಕ್ಕೆ ಬರುವದು. ಆದ್ದರಿಂದಈ ವಿಮಾ ಹಣದ ಮೇಲೆ ಕರವು ಅನ್ವಯಿಸುವದು.

'ಅ' ಎಂಬುವವನು ೨೫,೦೦೦ ರೂಪಾಯಿ ಬೆಲೆಬಾಳುವ ಮಶನರಿ ಸಾಮಾನುಗಳನ್ನು 'ಬ' ಎಂಬುವವನಿಗೆ ಕೊಟ್ಟನು. 'ಬ' ನು ಆ ಸಾಮಾನುಗಳನ್ನು ಮಾರಿ ೩೦,೦೦೦ ರೂಪಾಯಿಗಳಿಗೆ 'ಅ'ನ ಹೆಸರಿನಿಂದ ವಿಮಾ ಇಳಿಸಿ, ಹದಿನೈದು ಸಾವಿರರೂಪಾಯಿಗಳ ಕಂತುಗಳನ್ನು ತುಂಬಿದಾಗ 'ಅ'ನು ತೀರಿಕೊಂಡನು.

i) 'ಬ'ನು, ಮಶನರಿ ಸಾಮಾನುಗಳನ್ನು ಮಾರಿ ಬಂದ ಹಣದಿಂದ ಇನ್ಸೂರನ್ಸನ್ನು ತುಂಬಿಲ್ಲವೆಂದು ಸಿದ್ಧಮಾಡಿ ಕೊಡದೆ ಇದ್ದರೆ ೩೦,೦೦೦ ರೂಪಾಯಿಗಳಮೇಲೆ ಕರಾಕರಣೆಯನ್ನು ಮಾಡಲಾಗುವದು.

ii) ಮೃತನಿಂದ ಎಷ್ಟೇ ಬೆಲೆಯ ಆಸ್ತಿಯನ್ನು ಇನ್ನೊಬ್ಬನು ತನ್ನೆಡೆಗೆ ತೆಗೆದುಕೊಂಡು ಎಷ್ಟೇ ವರ್ಷಾಶನ ಅಥವಾ ಆಸ್ಥಿಗಳನ್ನು ನೀಡಿರಲಿ, ಆ ಬೆಲೆಗಳನ್ನು, ಆ ಅಂತರವನ್ನು ಕಾಯಿದೆಯು ಗಮ

ನಿಸುವದಿಲ್ಲ. ಮೇಲಿನ ಉದಾಹರಣೆಯಲ್ಲಿ 'ಅ'ನಿಂದ 'ಬ'ನು ಪಡೆದ ಆಸ್ತಿಯು ರೂ. ೫೫,೦೦೦ ಇದ್ದು, ವಿಮಾ ಹಣವು ರೂ. ೩೦,೦೦೦ ಇದ್ದಾಗ್ಯೂ, ರೂ. ೩೦,೦೦೦ ವನ್ನೇ ಕರಕ್ಕೆ ಗುರಿಮಾಡಲಾಗಿದೆ.

'ಅ' ಎಂಬವನು ತನ್ನ ಹೆಂಡತಿಗೆ ಮನೆಯ ವೆಚ್ಚಕ್ಕೆಂದು ಪ್ರತಿ ತಿಂಗಳ ರೂ. ೩೦೦ ರನ್ನು ಕೊಡುತ್ತಿದ್ದನು. ಅದಲ್ಲದೆ ಹೆಂಡತಿಯೂ ನವಕರಿಯನ್ನು ಮಾಡಿ ಪ್ರತಿ ತಿಂಗಳ ರೂ. ೭೦೦ ನ್ನು ಸಂಪಾದಿಸುತ್ತಿದ್ದಳು. 'ಅ'ನ ಹೆಂಡತಿಯು 'ಅ'ನ ಜೀವವಿಮೆಯನ್ನು ರೂ. ೨೨,೦೦೦ ಕ್ಕೆ ಇಳಿಸಿ, ಪ್ರತಿವರ್ಷ ೧ ಸಾವಿರ ರೂಪಾಯಿಗಳ ಕಂತನ್ನು ತಾನು ತುಂಬುತ್ತಿದ್ದಳು. 'ಅ' ನ ಮರಣಾನಂತರ ಈ ೨೦,೦೦೦ ಕರಕ್ಕೆ ಪಾತ್ರವಾಗುವದೋ.ಹೇಗೆ ?

i ) 'ಅ'ನ ಹೆಂಡತಿಯು ಪ್ರತಿತಿಂಗಳ 'ಅ' ನಿಂದ ರೂ. ೩೦೦ ನ್ನು ತೆಗೆದುಕೊಳ್ಳುತ್ತಿದ್ದರೂ, ಆವಳಿಗೆ ತನ್ನದೇ ಆದ ವರಮಾನವಿತ್ತು.

ii ) ಅಲ್ಲದೆ ಅವಳು ಪ್ರತಿ ತಿಂಗಳ ರೂ. ೩೦೦ ಗಳನ್ನು ಮನೆಯ ವೆಚ್ಚಕ್ಕೆಂದು ತೆಗೆದುಕೊಳ್ಳುತ್ತಿದ್ದಳು.

iii ) 'ಅ'ನ ಹೆಂಡತಿಯು, ತಾನು ತನ್ನ ಗಂಡನಿಂದ ತೆಗೆದುಕೊಂಡ ಹಣವನ್ನು ಮನೆಯ ವೆಚ್ಚಕ್ಕೆ ಉಪಯೋಗಿಸಿ ತನ್ನ ವರಮಾನದಿಂದಲೇ ಇನ್ಸುರನ್ಸ ಕಂತುಗಳನ್ನು ತುಂಬುತ್ತಿದ್ದಳೆಂದು ಸಿದ್ಧಮಾಡಿಕೊಟ್ಟಲ್ಲಿ, ಆ ವಿಮಾ ಹಣದಮೇಲೆ ಕರವು ಆಕರಿಸುವದಿಲ್ಲ.

ಆದರೆ ಮೇಲಿನ ಉದಾಹರಣೆಯಲ್ಲಿ 'ಅ'ನ ಹೆಂಡತಿಗೆ ಬೇರೆ ತನ್ನದೇ ವರಮಾನವಿರದಿದ್ದರೆ, ಆ ವಿಮಾಹಣವು ಕರಕ್ಕೆ ಪಾತ್ರವಾಗುವದು.

ಮಾನಗಳೆಂದು ಗಣಿಸಲ್ಪಡುವವು. 'ಅ'ನು ಪ್ರತಿವರ್ಷ ೫೦,೦೦೦ ರೂ. ಪಗಾರವನ್ನು ಪಡೆಯುತ್ತಿದ್ದರೂ, ಅದಕ್ಕೆ ಮರಣಾನಂತರ ಅಸ್ತಿತ್ವವಿಲ್ಲದಿರುವದರಿಂದ, ಅದು ಕರಕ್ಕೆ ಪಾತ್ರವಾಗಲಿಲ್ಲ ಇದರಿಂದ ೧೨ ಲಕ್ಷ ರೂಪಾಯಿ ಆಸ್ತಿಯುಳ್ಳ 'ಅ'ನು ೭ ಲಕ್ಷ ರೂಪಾಯಿಗಳನ್ನು ಉಳಿಸಿ, ಕೇವಲ ೫ ಲಕ್ಷ ರೂಪಾಯಿಗಳ ಕರವನ್ನು ಕೊಡಬಹುದಾಗಿತ್ತು.

ಆದರೆ ಈ ಕಲಮುಗಳಲ್ಲಿ, ಇಂತಹ ನಿಯಂತ್ರಿತ ಕಂಪನಿಗಳಿಗೆ ಆಸ್ತಿಗಳನ್ನು ವರ್ಗಾಯಿಸಿ, ಅವುಗಳಿಂದ ಉಪಭೋಗದ ಹಕ್ಕನ್ನು ಪಡೆಯುವದರಿಂದುಂಟಾಗುವ ಘಟನೆಗಳ ಬಗ್ಗೆ ವಿಶೇಷ ಕ್ರಮಗಳನ್ನು ಯೋಜಿಸಲಾಗಿದೆ. ಮೇಲಿನ ಉದಾಹರಣೆಯಲ್ಲಿ 'ಅ'ನು ಆಸ್ತಿಯ ಬೆಲೆಯನ್ನು, ಈ ರೀತಿಯಾಗಿ ಕಟ್ಟಲಾಗುವದು.

$$\text{ಆಸ್ತಿಯ ಬೆಲೆ} = \frac{\text{ಕಳೆದ ಮೂರು ವರುಷಗಳಲ್ಲಿ ಮೃತನು ಕಂಪನಿಯಿಂದ ತೆಗೆದುಕೊಂಡ ಒಟ್ಟು ಹಣ}}{\text{ಕಳೆದ ಮೂರು ವರುಷಗಳಲ್ಲಿ ಕಂಪನಿಯು ಮಾಡಿದ ಒಟ್ಟು ಲಾಭ.}} \times \text{ಕಂಪನಿಯ ಒಟ್ಟು ಆಸ್ತಿಯ ಬೆಲೆ.}$$

ಮೇಲಿನ ಉದಾಹರಣೆಯಲ್ಲಿ, ಕಂಪನಿಯು ಪ್ರತಿವರುಷ ಒಂದು ಲಕ್ಷ ರೂಪಾಯಿಯ ಲಾಭ ಮಾಡಿಕೊಂಡಿದೆ ಎಂದು ಗ್ರಹಿಸೋಣ.

ಕಳೆದ ಮೂರು ವರುಷಗಳಲ್ಲಿ ಮೃತನು ಕಂಪನಿಯಿಂದ ತೆಗೆದುಕೊಂಡ ಹಣ.

i) ಪಗಾರ (೫೦,೦೦೦ × ೩) ೧,೫೦,೦೦೦—೦—೦

ii) ಮನೆ (೪,೦೦೦ × ೩) ೧೨,೦೦೦—೦—೦

(ಮನೆಯ ವಾರ್ಷಿಕ ಭಾಡಿಗೆ ೫,೦೦೦
ಇದ್ದು, 'ಅ'ನು ಒಂದು ಸಾವಿರವನ್ನು
ಮಾತ್ರ ಕೊಡುತ್ತಿದ್ದನು )

iii ) ಉಳಿದ ರೀತಿಯಿಂದ
ಕಂಪನಿಯು ಕೊಟ್ಟ ಹಣ. ೩೦,೦೦೦— ೦—೦

೧,೯೩,೦೦೦—೦—೦

$$\text{ಆಸ್ತಿಯ ಬೆಲೆ} = \frac{೧,೯೩,೦೦೦}{೩,೦೦,೦೦೦} \times ೨೦,೦೦,೦೦೦$$

= ೧೨,೮೦,೦೦೦ ಮೃತನ ಕರಪಾತ್ರವಾಗುವ ಆಸ್ತಿ.

ಮೇಲಿನ ಉದಾಹರಣೆಯನ್ನು ಕೂಲಂಕುಷವಾಗಿ ಪರಿಶೀಲಿಸಿದರೆ, ಮೃತನು ನಿಯಂತ್ರಿತ ಕಂಪನಿಯಿಂದ ಮೂರು ವರುಷಗಳಲ್ಲಿ ಪಡೆದುಕೊಂಡ ಲಾಭ ಮತ್ತು ಕಂಪನಿಯು ಮೂರು ವರುಷಗಳಲ್ಲಿ ಮಾಡಿದ ಲಾಭ ಇವುಗಳನ್ನು, ಮೃತನ ಆಸ್ತಿಯ ಬೆಲೆಕಟ್ಟುವ ಕಾಲಕ್ಕೆ ಗಣನೆಗೆ ತೆಗೆದುಕೊಳ್ಳಲಾಗುವದು. ಆದರೆ ಇಂತಹ ಕಂಪನಿ ಪ್ರಾರಂಭವಾದ ಎರಡು ಅಥವಾ ಒಂದು ವರುಷಗಳಲ್ಲಿಯೇ ಮೃತನು ತೀರಿಕೊಂಡರೆ, ಮೂರು ವರುಷಗಳ ಲಾಭ ಹಾಗು ಮೃತನ ಉಪಭೋಗದ ಲೆಕ್ಕವು ದೊರಕಲಾರದು. ಇಂತಹ ಸಮಯದಲ್ಲಿ ಎಷ್ಟು ವರುಷಗಳವರೆಗಿನ ಲೆಕ್ಕ ಸಿಗುವದೋ ಅಷ್ಟನ್ನೇ ಗ್ರಹಿಸಲಾಗುವದು.

ಉದಾಹರಣೆಗಾಗಿ 'ಅ' ಎಂಬವನು ಒಂದು ಅಧಿಕೃತ ಕಂಪನಿಯನ್ನು ಸ್ಥಾಪಿಸಿ, ತನ್ನ ೩ ಲಕ್ಷ ರೂಪಾಯಿಯ ಆಸ್ತಿಯನ್ನು ಆ ಕಂಪನಿಗೆ ವರ್ಗಾಯಿಸುತ್ತಾನೆ. ತರನಂತರ ಒಂದು ವರುಷದಲ್ಲಿಯೇ ಮರಣಹೊಂದುತ್ತಾನೆ. ಆ ವರುಷ ಆ ಕಂಪನಿಯು ೧,೫೦,೦೦೦ರೂ.

ಲಾಭವನ್ನು ಮಾಡಿಕೊಂಡಿತ್ತಲ್ಲದೆ, 'ಅ'ನಿಗೆ ವಿವಿಧ ರೂಪದಿಂದ ೧,೦೦,೦೦೦ ರೂ. ಕಂಪನಿಯು ಆ ವರ್ಷ ಕೊಟ್ಟಿತು. ಕಂಪನಿಯ ಒಟ್ಟು ಆಸ್ತಿಯ ಬೆಲೆ ೬,೦೦,೦೦೦ರೂ. ಮಾಡಲಾಗಿದ್ದಿತು.

$$\text{'ಅ' ನ ಆಸ್ತಿಯ ಬೆಲೆ} = \frac{೧,೦೦,೦೦೦}{೧,೫೦,೦೦೦} \times ೬,೦೦,೦೦೦$$

$$= ೪,೦೦,೦೦೦$$

ಮೃತನು ಮರಣ ಹೊಂದಿದ ವರುಷದಿಂದ ಹಿಂದಿನ ಮೂರು ವರುಷಗಳ ಕಂಪನಿಯ ಲಾಭವನ್ನು ಹಾಗೂ ಮೃತನ ಲಾಭವನ್ನು ಗಣಿಸಲಾಗುವದೆಂದು ಮೇಲೆಯೇ ಹೇಳಲಾಗಿದೆ. ಇಂತಹ ಮೂರು ವರುಷಗಳಲ್ಲಿ ಕಂಪನಿಯು ಯಾವದೇ ವರ್ಷ ಹಾನಿಯನ್ನು ಸೋಸಿದ್ದರೆ, ಕಂಪನಿಯ ಮೂರು ವರುಷದ ಲಾಭದಲ್ಲಿ ಅದನ್ನು ಕಳೆಯಲಾಗುವದು. ಉದಾಹರಣೆಗಾಗಿ 'ಅ' ಎಂಬುವವನು ತನ್ನ ಆಸ್ತಿಯನ್ನು ಒಂದು ಅಧಿಕೃತ ನಿಯಂತ್ರಿತ ಕಂಪನಿಗೆ ವರ್ಗಾಯಿಸಿ ಮರಣದ ಪೂರ್ವದ ಮೂರು ವರುಷಗಳಲ್ಲಿ ರೂ. ೨,೦೦೦, ೪,೦೦೦, ೬,೦೦೦ ಹೀಗೆ ೧೫,೦೦೦ ರೂಪಾಯಿಗಳ ಲಾಭವನ್ನು ಪಡೆಯುತ್ತಾನೆ. ಕಂಪನಿಯು ಮೊದಲನೆಯ ವರ್ಷ ೧೫,೦೦೦ ಎರಡನೆಯ ವರ್ಷ ೧೫,೦೦೦ ಲಾಭ ಮಾಡಿಕೊಂಡು ಮೂರನೆಯ ವರ್ಷ ೬,೦೦೦ ರೂ. ಹಾನಿಯನ್ನು ಸೋಸುತ್ತದೆ. ಕಂಪನಿಯ ಒಟ್ಟು ಆಸ್ತಿಯ ಬೆಲೆ ರೂ. ೫೦,೦೦೦ ಇದೆ.

$$\text{ಅನ ಆಸ್ತಿಯ ಬೆಲೆ} = \frac{೨೦೦೦+೪೦೦೦+೬೦೦೦}{(೧೫,೦೦೦+೧೫೦೦೦)-(೬೦೦೦)} \times ೫೦,೦೦೦$$

$$\text{,,} \quad = \frac{೧೨,೦೦೦}{೨೪,೦೦೦} \times ೫೦,೦೦೦$$

$$\text{,,} \quad = ೨೫,೦೦೦ \text{ ರೂ.}$$

ಇದೇ ಉದಾಹರಣೆಯನ್ನು ಹೀಗೆ ತೆಗೆದುಕೊಳ್ಳೋಣ.

'ಅ' ನು ಮರಣದ ಪೂರ್ವದ ಮೂರು ವರುಷಗಳಲ್ಲಿ ರೂ. ೩,೦೦೦, ೪,೦೦೦ ಹಾಗೂ ೮,೦೦೦ ಹೀಗೆ ರೂ. ೧೫೦೦೦ ಲಾಭವನ್ನು ಕಂಪನಿಯಿಂದ ಪಡೆಯುತ್ತಾನೆ. ಕಂಪನಿಯು ಈ ಮೂರು ವರುಷಗಳಲ್ಲಿ ಮೊದಲನೆಯ ಹಾಗೂ ಎರಡನೆಯ ವರುಷ ಅನುಕ್ರಮವಾಗಿ ರೂ. ೧೫,೦೦೦ ಹಾಗೂ ೧೫,೦೦೦ ಲಾಭ ಮಾಡಿಕೊಂಡು ಮೂರನೆಯ ವರ್ಷ ರೂ. ೩೫,೦೦೦ ಹಾನಿಯನ್ನು ಸೋಸುತ್ತದೆ.

ಈ ಉದಾಹರಣೆಯಲ್ಲಿ ಮೃತನ ಮೂರು ವರುಷಗಳ ಉತ್ಪನ್ನವು, ಕಂಪನಿಯ ಮೂರು ವರುಷಗಳ ಉತ್ಪನ್ನವನ್ನು ಮೀರುವದರಿಂದ, ಕಂಪನಿಯ ಸಂಪೂರ್ಣ ಆಸ್ತಿ ( ಅಂದರೆ ೫೦,೦೦೦ ರೂ. ) ಕರಕ್ಕೆ ಪಾತ್ರವಾಗುವದು.

# ಪ್ರಕರಣ ೫.



## ೧. ಕರದಿಂದ ಮುಕ್ತಮಾಡಲ್ಪಟ್ಟ ಆಸ್ತಿಗಳು—

ಆಸ್ತಿಕರವು ಎಲ್ಲ ತರದ ಆಸ್ತಿಗಳ ಮೇಲೆ ಅನ್ವಯಿಸುವದಾದರೂ ಕೆಲವು ಆಸ್ತಿಗಳನ್ನು ಈ ಕರದಿಂದ ಮುಕ್ತ ಮಾಡಲಾಗಿದೆ

೧) ಮಿತಕ್ಷರಾ ಪದ್ಧತಿಯಿಂದ ಹಿಂದೂ ಕುಟುಂಬವು 'ಕರ್ತಾ' ನಿಂದ ನಡೆಯುತ್ತಿದ್ದಾಗ, ಕುಟುಂಬದ ಸದಸ್ಯನು ಅಲ್ಪವಯಿ ಇದ್ದಾಗಲೇ ಮರಣ ಹೊಂದಿದರೆ, ಮೃತನ ಆಸ್ತಿಯ ಮೇಲೆ ಕರವನ್ನು ಹೇರಲಾಗುವದಿಲ್ಲ.†

೨) ಮರುಮಕಲಾಯಮ್ ಪದ್ಧತಿಯಂತೆ ಕುಟುಂಬವು ನಡೆಯುತ್ತಿದ್ದರೆ, ಮೃತನು ಅಲ್ಪವಯಿಯಾಗಿದ್ದರೆ, ಮೃತನ ಆಸ್ತಿಯ ಮೇಲೆ ಕರವು ಆಕರಿಸುವದಿಲ್ಲ.

೩) ಅಳಿಯ ಸಂತಾನ ಪದ್ಧತಿಯಿಂದ ಕುಟುಂಬವು ನಡೆಯುತ್ತಿದ್ದರೆ, ಮೃತನು ಅಲ್ಪವಯಿಯಾಗಿದ್ದರೆ, ಅವನ ಆಸ್ತಿಯಮೇಲೆ ಕರವು ಬೀಳುವದಿಲ್ಲ.

೪) ಮೃತನು ಯಾವದೇ ಆಸ್ತಿಯನ್ನು ಬೇರೊಬ್ಬರ ಟ್ರಸ್ಟಿಯಾಗಿ ಧಾರಣ ಮಾಡಿದ್ದರೆ, ಆ ಆಸ್ತಿಯ ಮೇಲೆ ಕರವು ಅನ್ವಯಿಸುವದಿಲ್ಲ. ಉದಾಹರಣೆಗಾಗಿ 'ಅ' ಎಂಬವನು 'ಬ' ಎಂಬವನ ೧ ಲಕ್ಷ ರೂ ಆಸ್ತಿಗೆ ಟ್ರಸ್ಟಿಯಾಗಿ ನಿಯಮಿಸಲ್ಪಟ್ಟಿದ್ದು, 'ಅ' ನು ತೀರಿ

† ವಿವರಗಳನ್ನು ಮುಂದೆ ಚರ್ಚಿಸಲಾಗಿದೆ.

ಕೊಂಡರೆ, ಈ ೧ ಲಕ್ಷ ರೂಪಾಯಿ ಆಸ್ತಿಯ ಮೇಲೆ ಕರವು ಅನ್ವಯಿ ಸುವದಿಲ್ಲ.

೫) ಭಾರತವನ್ನು ಬಿಟ್ಟು ಹೊರಗೆ ಇರುವ ಅಂದರೆ ಪರದೇಶದಲ್ಲಿರುವ ಸ್ಥಿರ ಆಸ್ತಿಗೂ ಕರವು ಅನ್ವಯಿಸುವದಿಲ್ಲ. ಉದಾಹರಣೆಗಾಗಿ 'ಅ' ಎಂಬವನು ಡಬ್ಲಿನ್ನದಲ್ಲಿ ೩ ಲಕ್ಷ ರೂಪಾಯಿ ಬೆಲೆಬಾಳುವ ಮನೆಯನ್ನು ಕೊಂಡಿದ್ದರೆ, ಈ ಆಸ್ತಿಯು ಕರಕ್ಕೆ ಪಾತ್ರವಾಗುವದಿಲ್ಲ.

೬) ಮೃತನು ಮರಣಹೊಂದುವ ಸಮಯದಲ್ಲಿ, ಭಾರತದ ಗಡಿ ರೇಖೆಗಳನ್ನು ಬಿಟ್ಟು ಹೊರಗೆ ಇರುವ ಅಂದರೆ ಪರದೇಶದಲ್ಲಿ ನ್ಯಾಯವಾಗಿ ವಾಸ್ತವ್ಯ ಮಾಡಿದ್ದರೆ (Domiciled).

ಭಾರತವನ್ನು ಬಿಟ್ಟು ಹೊರಗೆ ಇರುವ ಅಸ್ಥಿರ ಆಸ್ತಿಗಳಿಗೆ ಕರವು ಆಕರಿಸುವದಿಲ್ಲ. ಉದಾಹರಣೆಗಾಗಿ, 'ಅ' ಎಂಬ ಮೂಲ ಭಾರತೀಯನು ದಕ್ಷಿಣ ಆಫ್ರಿಕೆಯಲ್ಲಿ ನ್ಯಾಯವಾಗಿ ವಾಸ್ತವ್ಯ ಮಾಡುತ್ತಿದ್ದರೂ, ಅವನು ೨ ಲಕ್ಷ ರೂಪಾಯಿ ಅಸ್ಥಿರ ಆಸ್ತಿಯನ್ನು ದಕ್ಷಿಣ ಆಫ್ರಿಕೆಯಲ್ಲಿಯೂ, ಮೂರು ಲಕ್ಷ ಬೆಲೆ ಬಾಳುವ ಆಸ್ತಿಯನ್ನು ಹುಬ್ಬಳ್ಳಿಯಲ್ಲಿಯೂ ಸಂಪಾದಿಸಿದ್ದರೆ ಅವನ ೨ ಲಕ್ಷ ರೂ. ದಕ್ಷಿಣ ಆಫ್ರಿಕೆಯ ಆಸ್ತಿಯ ಮೇಲೆ ಕರವು ಅನ್ವಯಿಸುವದಿಲ್ಲ.

೭) ಗಂಡ-ಹೆಂಡರಿಬ್ಬರು, ಪ್ರತ್ಯೇಕವಾಗಿಯಾಗಲಿ, ಅಥವಾ ಸಂಯುಕ್ತವಾಗಿಯಾಗಲಿ ಆಸ್ತಿಯನ್ನು, ಈ ಕಾಯದೆ ಅಮಲಿನಲ್ಲಿ ಬರುವ ಮೊದಲೇ ಅಂದರೆ ೧೫ ಅಕ್ಟೋಬರ, ೧೯೫೩ ರ ಮೊದಲೇ ವ್ಯವಸ್ಥಿತಗೊಳಿಸಿ ( Settlement ef Property ) ಮತ್ತು ಅದರ ಉಪಭೋಗವನ್ನು ಗಂಡನಾಗಲಿ ಅಥವಾ ಹೆಂಡತಿಯಾಗಲಿ ಅಥವಾ ಇಬ್ಬರೂ ತೆಗೆದುಕೊಳ್ಳುತ್ತಿದ್ದರೆ, ಗಂಡ ಅಥವಾ ಹೆಂಡತಿ ಮರಣ ಹೊಂದಿದಲ್ಲಿ ಈ ಆಸ್ತಿಯಮೇಲೆ ಕಲಮು ೨೫ ರನ್ವಯ

ಕರವು ಆಕರಿಸುವದಿಲ್ಲ. ಉದಾಹರಣೆಗಾಗಿ, 'ಅ' ಎಂಬವನು ೧, ಜನವರಿ ೧೯೫೦ ರಂದು ತನ್ನ ಆಸ್ತಿಯನ್ನು ತನ್ನ ಹೆಂಡತಿಯ ಹೆಸರಿನಲ್ಲಿ ವ್ಯವಸ್ಥಿತಗೊಳಿಸಿ ( Settlement ) ಅವಳ ಮರಣದ ನಂತರ ಆ ಆಸ್ತಿಯು ತನ್ನ ಮಗನಿಗೆ ಬರಬೇಕೆಂದು ವಿಧಿಸಿದ್ದಾನೆ. 'ಅ'ನ ಹೆಂಡತಿ ತೀರಿಕೊಂಡರೆ ಅವಳ ಈ ಆಸ್ತಿಯು ಅವಳ ಮಗನಿಗೆ ಹೋಗುವದಾದರೂ, ಅದು ಕರಕ್ಕೆ ಪಾತ್ರವಾಗುವದಿಲ್ಲ.

ಅದರಂತೆಯೇ 'ಅ'ಮತ್ತು ಅವನ ಹೆಂಡತಿ, ೧೯೫೧ ರಲ್ಲಿ ತಮ್ಮ ಆಸ್ತಿಯನ್ನು ವ್ಯವಸ್ಥಿತಗೊಳಿಸಿ (Settlement) 'ಅ'ನು ತನ್ನ ಹೆಂಡತಿಗಿಂತಲೂ ಮೊದಲು ಮರಣಹೊಂದಿದರೆ, ಆ ಆಸ್ತಿಯು ಹೆಂಡತಿಗೆ ಸಲ್ಲಬೇಕೆಂದೂ, ಹೆಂಡತಿಯು ಮೊದಲು ಮರಣಹೊಂದಿದರೆ, ಎಲ್ಲ ಆಸ್ತಿಯು ತನಗೆ ಸಲ್ಲಬೇಕೆಂದು, ವಿಧಿಸಿದ್ದಾನೆ 'ಅ'ನು ಮರಣಹೊಂದಿದರೆ ಆಸ್ತಿಕರವು ಅನ್ವಯಿಸುವದಿಲ್ಲ. ಅದರಂತೆಯೇ 'ಅ'ನು ಜೀವದಿಂದಿದ್ದು 'ಅ'ನ ಹೆಂಡತಿ ಮರಣ ಹೊಂದಿದ್ದರೂ ಕರವು ಅನ್ವಯಿಸುವದಿಲ್ಲ.

೮ ) ಆಸ್ತಿಯನ್ನು ಹಣಕ್ಕಾಗಲಿ ಅಥವಾ ತತ್ಸಮ ವಸ್ತುಗಳಿಗಾಗಲಿ ಮಾರಿದ್ದರೆ, ಮಾರಿದ ಆಸ್ತಿಯನ್ನು ಗ್ರಹಿಸಲಾಗುವದಿಲ್ಲ

೯ ) ಬೇಸಾಯದ ಸಾಮಾನುಗಳು, ಇನ್ನಿತರ ಗ್ರಹೋಪಯೋಗಿ ವಸ್ತುಗಳು ಅಂದರೆ ಮೃತನ ಜೀವನಕ್ಕೆ ಸಂಬಂಧಪಟ್ಟಂತಹವುಗಳ ಬೆಲೆ ಹೆಚ್ಚೆಂದರೆ ೨೫೦೦ ರೂಪಾಯಿಗಳ ವರೆಗೆ ಕರದಿಂದ ಮುಕ್ತಮಾಡಲಾಗಿದೆ.

೧೦ ) ಮಾರಲಿಕ್ಕೆ ಇಟ್ಟಿರದಂತಹ ಪುಸ್ತಕಗಳು ಎಷ್ಟೇ ಬೆಲೆಯದಿದ್ದಿರಲಿ ಅದನ್ನು ಮುಕ್ತಮಾಡಲಾಗಿದೆ.

೧೧) ಉಪಯೋಗಿಸಲ್ಪಡುತ್ತಿದ್ದ ಬಟ್ಟೆಗಳು ಆದರೆ ಉಪ ಯೋಗಿಸಲ್ಪಡುತ್ತಿರುವ ಆಭರಣಗಳನ್ನು ಮುಕ್ತಮಾಡಲಾಗುವದಿಲ್ಲ.

೧೨) ರಾಷ್ಟ್ರೀಯ, ಐತಿಹಾಸಿಕ, ಶಾಸ್ತ್ರೀಯ ಮಹತ್ವದ ರೇಖಾಚಿತ್ರಗಳು, ವರ್ಣರಂಜಿತ ಚಿತ್ರಗಳು, ಹಸ್ತ ಪ್ರತಿಗಳು ಇನ್ನಿತರ ಕಲಾತ್ಮಕ ಅಥವಾ ಶಾಸ್ತ್ರೀಯ ಕೆಲಸಗಳು.

i ) ಮನೆತನದಲ್ಲಿಯೇ ಇಟ್ಟರೆ, ಅಥವಾ ಮೃತನ ತರುವಾಯ ಕೇಂದ್ರ ಮಂಡಳ (ಸೆಂಟ್ರಲ್ ಬೋರ್ಡ) ನಿರ್ಣಯಿಸಿದಂತೆ ವಿಲೇವಾಟ ಮಾಡಲ್ಪಡುತ್ತಿದ್ದರೆ

ii ) ಸರಕಾರಕ್ಕಾಗಲಿ, ಅಥವಾ ಯಾವದೇ ವಿಶ್ವವಿದ್ಯಾನಿಲಯಕ್ಕಾಗಲಿ ಅಥವಾ ಯಾವದೇ ಸಾರ್ವಜನಿಕ ಸಂಸ್ಥೆಗಾಗಲಿ, ಸಂಪೂರ್ಣವಾಗಿ ದೇಣಿಗೆ ಕೊಡುತ್ತಿದ್ದರೆ ಅವು ಕರದಿಂದ ಮುಕ್ತ ಮಾಡಲ್ಪಟ್ಟಿರುವವು.

೧೩) ಮೇಲೆ ಕಾಣಿಸಿದ ರೇಖಾಚಿತ್ರಗಳು ಮತ್ತು ಇನ್ನಿತರ ಕಲಾತ್ಮಕ ಕೆಲಸಗಳು ಮಾರಲಿಕ್ಕೆ ಇಟ್ಟಿರದಂತಹಗಳಿದ್ದರೆ

೧೪) ಮಿತಕ್ಷರಾ ಅಥವಾ ಇನ್ನಾವದೇ ಪದ್ಧತಿಯಲ್ಲಿ ಹಿಂದೂ ಕುಟುಂಬವು ನಡೆಯುತ್ತಿದ್ದಾಗ, ಗಂಡನು ಮರಣ ಹೊಂದಿದ ೭ ವರುಷಗಳಲ್ಲಿಯೇ ಆತನ ವಿಧವೆಯು ಮೃತಪಟ್ಟರೆ, ಅವಳ ಆಸ್ತಿಯಮೇಲೆ ಕರವನ್ನು ಹೇರಲಾಗುವದಿಲ್ಲ.

೩೧ ನೇ ಈ ಕಲಮಿಗೆ ಸ್ಪಷ್ಟೀಕರಣವು ಅವಶ್ಯವಾಗಿದೆ.

i ) ಗಂಡನ ಮರಣದಿಂದ, ಅವನ ಆಸ್ತಿಯು ಆತನ ವಿಧವೆಯಾದ ಹೆಂಡತಿಗೆ ಸಲ್ಲಿರಬೇಕು.

ii ) ಗಂಡನ ಮರಣದಂದು, ಅವನ ಆಸ್ತಿಯ ಮೇಲೆ ಕರವು ಕೊಡಲ್ಪಟ್ಟಿರಬೇಕು.

iii) ಮೃತನ ವಿಧವೆಯು ಮೃತನು ಮರಣ ಹೊಂದಿದ ದಿವಸ ದಿಂದ ಏಳು ವರುಷಗಳ ಅವಧಿಯಲ್ಲಿಯೇ ಮರಣ ಹೊಂದಿರಬೇಕು.

iv ) ವಿಧವೆಯು ಮರಣದಿಂದ, ಅವಳ ಆಸ್ತಿಯು ಹಸ್ತಾಂತರವಾಗಬೇಕು

v ) ಹಿಂದೂ ಕುಟುಂಬವು ಯಾವದೇ ಪದ್ಧತಿಯಿಂದ ನಡೆಯಲಿ, ಅದನ್ನು ಇಲ್ಲಿ ಗಮನಿಸಲಾಗುವದಿಲ್ಲ.

೧೫ ) ಮೃತನು ತನ್ನ ಮರಣ ಪೂರ್ವದಲ್ಲಿ ಎರಡು ವರುಷಗಳ ಮೊದಲು ವಾಟಣಿ ಆದ ಆಸ್ತಿಗಳು

೧೬ ) ಮೃತನ ಆಸ್ತಿಯು ೧ ಲಕ್ಷ ರೂಪಾಯಿ ಅಥವಾ ಅದಕ್ಕಿಂತಲೂ ಕಡಿಮೆ ಇದ್ದರೆ, ಹಿಂದೂ ಅವಿಭಕ್ತ ಕುಟುಂಬದ ಸದಸ್ಯನ ಪಾಲು ೫೦,೦೦೦ ರೂಪಾಯಿ ಅಥವಾ ಅದಕ್ಕಿಂತಲೂ ಕಡಿಮೆ ಇದ್ದರೆ ಆ ಆಸ್ತಿಯಮೇಲೆ ಕರವನ್ನು ಹೇರಲಾಗುವದಿಲ್ಲ. ಇಲ್ಲದೆ ಒಟ್ಟು ಆಸ್ತಿಯ ಬೆಲೆಯಲ್ಲಿ ಮೊದಲಿನ ಒಂದು ಲಕ್ಷ ರೂಪಾಯಿಗಳಿಗೂ, ಹಿಂದೂ ಅವಿಭಕ್ತ ಕುಟುಂಬವಿದ್ದರೆ ೫೦,೦೦೦ ರೂಪಾಯಿಗಳಿಗೂ ಕರವಿಲ್ಲ.

ಉದಾಹರಣೆಗಾಗಿ :- 'ಅ' ಎಂಬವನ ಆಸ್ತಿಯು ಕೆಳಗಿನಂತಿದೆ.

| | |
|---|---|
| 'ಅ'ನ ಮನೆ | ೪೦,೦೦೦—೦—೦ |
| ಬಂಗಾರದ ಒಡವೆಗಳು | ೨೬,೦೦೦—೦—೦ |
| ಟಾಟಾ ಕಂಪನಿಯಲ್ಲಿ 'ಅ'ನಶೇರುಗಳಬೆಲೆ | ೩೫,೦೦೦—೦—೦ |
| ಮಾರಲಿಕ್ಕೆ ಇಟ್ಟಿಂಥಹ ಪುಸ್ತಕಗಳು | ೫೦೦—೦—೦ |
| 'ಅ' ಮತ್ತು ಕಂಪನಿ' ಎಂಬ ಭಾಗೀದಾರಿಕೆಯಲ್ಲಿ 'ಅ'ನ ಭಾಗ | ೨೦,೦೦೦—೦—೦ |
| 'ಅ'ನ ಒಟ್ಟು ಆಸ್ತಿ | ೧೨೧, ೫೦೦—೦—೦ |
| ಈ ಕಲಮಿನನ್ವಯ ರಿಯಾಯತ | ೧,೦೦,೦೦೦—೦—೦ |
| ∴ ಕರಕ್ಕೆ ಪಾತ್ರವಾಗುವ ಆಸ್ತಿ | ೨೧,೫೦೦—೦—೦ |

ಹಿಂದೂ ಏಕತ್ರ ಕುಟುಂಬದ ಬಗೆಗೆ, ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. 'ಮಿತಕ್ಷರಾ' ಪದ್ಧತಿಯಂತೆ, ಒಂದು ಹಿಂದೂ ಅವಿಭಕ್ತ ಕುಟುಂಬವು ನಡೆಯುತ್ತಿದ್ದು ಅದರಲ್ಲಿ 'ಅ' 'ಬ' 'ಕ' ಮತ್ತು 'ಡ' ಎಂಬ ಸದಸ್ಯರಿದ್ದಾರೆ. 'ಡ'ನು ಮೃತಪಟ್ಟಾಗ, ಆ ಕುಟುಂಬದ ಒಟ್ಟು ಆಸ್ತಿ ಈ ಕೆಳಗಿನಂತಿತ್ತು.

| | | |
|---|---|---|
| ಕುಟುಂಬದ ಮನೆಯ ಬೆಲೆ | .... | ೬೦,೦೦೦—೦—೦ |
| ಕುಟುಂಬವು ವ್ಯವಹಾರದಲ್ಲಿ ತೊಡಗಿಸಿದ ಒಟ್ಟು ರಕಮು | .... | ೧,೨೦,೦೦೦—೦—೦ |
| ಕುಟುಂಬದ ಇತರ ಆಸ್ತಿಗಳ ಬೆಲೆ | .... | ೪೦,೦೦೦—೦—೦ |
| ಕರಕ್ಕೆ ಪಾತ್ರವಾಗುವ ಭೂಮಿಗಳು | .... | ೨,೦೦,೦೦೦—೦—೦ |
| ಕುಟುಂಬದ ಒಟ್ಟು ಆಸ್ತಿ | .... | ೪,೨೦,೦೦೦—೦—೦ |
| ಇದರಲ್ಲಿ 'ಡ'ನ ಪಾಲು | .... | ೧,೦೫,೦೦೦—೦—೦ |
| ಈ ಕಲಮಿನನ್ವಯ ರಿಯಾಯತಿ | .... | ೫೦,೦೦೦—೦—೦ |
| ಕರಕ್ಕೆ ಪಾತ್ರವಾಗುವ ಆಸ್ತಿ | .... | ೫೫,೦೦೦—೦—೦ |

## ಮಿತಕ್ಷರಾ ಪದ್ಧತಿಯ ಕುಟುಂಬ

ಆಸ್ತಿಕರ ಕಾನೂನಿನ ೭ (೨) ಕಲಮಿನನ್ವಯ ಮಿತಕ್ಷರಾ ಪದ್ಧತಿಯಂತೆ ಹಿಂದೂ ಅವಿಭಕ್ತ ಕುಟುಂಬವು ನಡೆಯುತ್ತಿದ್ದರೆ ಕುಟುಂಬದ ಓರ್ವ ಸದಸ್ಯನು ೧೮ ವರ್ಷ ತುಂಬುವ ಮೊದಲೇ ಅಂದರೆ ಅಲ್ಪವಯಿ ಇದ್ದಾಗಲೇ ಮರಣ ಹೊಂದಿದರೆ ಅವನ ಪಾಲಿನ ಮೇಲೆ ಕರವು ಆಕರಿಸಲ್ಪಡುವದಿಲ್ಲ.

ಆದರೆ ಮೃತನ ತಂದೆ ಅಥವಾ ಅಜ್ಜ ಮೊದಲಾದವರು ಜೀವಂತರಿರ
ದಿದ್ದರೆ ಕರವು ಆಕರಿಸಲ್ಪಡುವದು. ಉದಾಹರಣೆಗಾಗಿ, 'ಅ' 'ಬ' 'ಕ'
ಮತ್ತು 'ಡ' ಎಂಬವರು ಮಿತಕ್ಷರಾ ಪದ್ಧತಿಯಿಂದ ನಡೆಯುವ ಒಂದು
ಏಕತ್ರ ಘರಾಣೆಯ (ಅವಿಭಕ್ತ ಕುಟುಂಬದ) ಸದಸ್ಯರಿದ್ದಾರೆ. ಇದರಲ್ಲಿ
'ಅ' 'ಬ' 'ಕ' ಎಂಬವರು ಬಂಧುಗಳಿದ್ದು, 'ಡ' ಎಂಬವನು 'ಕ'ನ
ಮಗನಿದ್ದಾನೆ. 'ಡ'ನು ಅಲ್ಪವಯಿಇದ್ದಾಗಲೇ ಮರಣ ಹೊಂದಿದರೆ
ಕರವು ಆಕರಿಸಲ್ಪಡುವದಿಲ್ಲ. ಆದರೆ 'ಕ'ನು ಮರಣ ಹೊಂದಿದ
ನಂತರ 'ಡ'ನು ಮರಣ ಹೊಂದಿದರೆ 'ಡ'ನು ಅಲ್ಪವಯಿ ಇದ್ದರೂ
ಕೂಡ ಏಕತ್ರ ಕುಟುಂಬದ ಆತನ ಪಾಲು ಕರಕ್ಕೆ ಪಾತ್ರವಾಗುವದು.

೨) ಈ ಕೆಳಗೆ ಕಾಣಿಸಿದ ಆಸ್ತಿಗಳು, ಕರದಿಂದ ಮುಕ್ತ ಮಾಡ
ಲ್ಪಟ್ಟಿದ್ದರೂ ಆಸ್ತಿಕರದ ಧಾರಣೆಯನ್ನು ಕಟ್ಟುವದಕ್ಕಾಗಿ (For
rate purpose) ಮಾತ್ರ ಒಟ್ಟು ಆಸ್ತಿಯಲ್ಲಿ ಕೂಡಿಸಲ್ಪಡುತ್ತವೆ

೧) ಸಾರ್ವಜನಿಕ ಸಂಸ್ಥೆಗಳಿಗೆ, ಮೃತನು ತನ್ನ ಮರಣದ
ಪೂರ್ವದಲ್ಲಿ ಆರು ತಿಂಗಳೊಳಗಾಗಿ ದೇಣಿಗೆಯನ್ನು ನೀಡಿದ್ದರೆ ಅತಿ
ಹೆಚ್ಚೆಂದರೆ ರೂ. ೨,೫೦೦ ವರೆಗೆ ಮಾತ್ರ.

೨) ಇತರರಿಗೆ ಮೃತನು ತನ್ನ ಮರಣದ ಮುಂಚೆ ಎರಡು ವರು
ಷಗಳ ಒಳಗಾಗಿ ಬಕ್ಷೀಸನ್ನು ನೀಡಿದ್ದರೆ, ಅತಿ ಹೆಚ್ಚೆಂದರೆ ರೂಪಾಯಿ
೧೫೦೦ ವರೆಗೆ.

ಉದಾಹರಣೆಗಾಗಿ 'ಅ' ಎಂಬವನು ೨೬ ಫೆಬ್ರುವರಿ, ೧೯೫೨
ರಂದು 'ಬ' ಎಂಬವನಿಗೆ ೩೫೦೦ ರೂ. ಗಳ ಬಕ್ಷೀಸನ್ನು ಕೊಟ್ಟನು.
ಆಗಸ್ಟ ೧೬, ೧೯೫೩ ರಂದು ಒಂದು ವಿಶ್ವವಿದ್ಯಾನಿಲಯಕ್ಕೆ ೫೦೦೦
ರೂಪಾಯಿಗಳ ದೇಣಿಗೆಯನ್ನುನೀಡಿ, ಅಕ್ಟೋಬರ ೧೯, ೧೯೫೩ರಂದು

ಮರಣ ಹೊಂದಿದನು. ಆಗ ಅವನ ಉಳಿದ ಆಸ್ತಿಗಳು ಈ ಕೆಳಗಿನಂತಿದ್ದವು.

| | | |
|---|---|---|
| ಸ್ಥಿರ ಆಸ್ತಿಗಳು | .... | ೧,೨೦,೦೦೦—೦—೦ |
| ಅಸ್ಥಿರ ಆಸ್ತಿಗಳು | .... | ೭೫,೦೦೦—೦—೦ |
| | | ೧,೯೫,೦೦೦—೦—೦ |
| 'ಬ' ನಿಗೆ ಕೊಟ್ಟ ಬಕ್ಷೀಸು (೨೬-೨-೫೨) | | ೩,೫೦೦—೦—೦ |
| ವಿಶ್ವ ವಿದ್ಯಾನಿಲಯಕ್ಕೆ ಕೊಟ್ಟ ದೇಣಿಗೆ (೧೬—೮—೧೯೫೩) | .... | ೫೦೦೦—೦—೦ |
| ಒಟ್ಟು ಕರ ಪಾತ್ರವಾಗುವ ಆಸ್ತಿ | .... | ೨,೦೩,೫೦೦—೦—೦ |

ಹೀಗೆ ಲೆಕ್ಕಮಾಡಿ ೨,೦೩,೫೦೦ ರೂಪಾಯಿಗಳ ಮೇಲೆ ಕರವನ್ನುಕಟ್ಟಿ, ಒಟ್ಟುಆಸ್ತಿಯ ಮೇಲೆ ಸರಾಸರಿ ಕರವನ್ನುತೆಗೆದು,

| | |
|---|---|
| 'ಬ' ನಿಗೆ ಬಕ್ಷೀಸು | ೧೫೦೦—೦—೦ |
| ವಿಶ್ವವಿದ್ಯಾನಿಲಯಕ್ಕೆ ದೇಣಿಗೆ | ೨೫೦೦—೦—೦ |
| | ೪೦೦೦—೦—೦ |

ನಾಲ್ಕುಸಾವಿರ ರೂಪಾಯಿಗಳಮೇಲೆ ಬೀಳಬಹುದಾದ ಸರಾಸರಿ ಕರವನ್ನು ಬಿಟ್ಟು ಕರದಿಂದ ವಜಾಮಾಡಲಾಗುವದು.

೩) ಮೃತನು ಒಂದು ಅಥವಾ ಅನೇಕ ಪಾಲಿಸಿಗಳಿಂದ ತನ್ನ ಜೀವವಿಮೆಯನ್ನು ಇಳಿಸಿದ್ದರೆ ಅತಿ ಹೆಚ್ಚೆಂದರೆ ೫,೦೦೦ ರೂ.ಗಳ ವರೆಗೆ ಮಾತ್ರ.

೪) ಆಸ್ತಿಕರವನ್ನು ಕೊಡುವದಕ್ಕೆಂದು ಸರಕಾರದಲ್ಲಿ ಹಣವನ್ನು ಇಟ್ಟಿದ್ದರೆ ಅತಿಹೆಚ್ಚೆಂದರೆ ರೂ. ೫೦,೦೦೦ ವರೆಗೆ ಮಾತ್ರ.

೫ ) ಇನ್ಶೂರನ್ಸ ಪಾಲಿಸಿಯಿಂದಾಗಲಿ, ಟ್ರಸ್ಟದಿಂದಾಗಲೀ ಅಥವಾ ಆಸ್ತಿ ವ್ಯವಸ್ಥೆಗೊಳಿಸುವದರಿಂದಾಗಲಿ, ( Settlement of property ) ತಂದೆಯಿಂದ ಅಥವಾ ತಾಯಿಯಿಂದ ಅಥವಾ "ಸ್ವಾಭಾವಿಕ ಪಾಲಕನಿಂದ" ( Natural Guardian ) ತನ್ನ ಮನೆತನದಲ್ಲಿಯ ಹೆಣ್ಣುಮಕ್ಕಳ ವಿವಾಹಕ್ಕೆಂದು ಹಣವನ್ನು ತೆಗೆದಿಟ್ಟಿದ್ದರೆ ಅತಿ ಟೆಚ್ಚೆಂದರೆ ಪ್ರತಿಯೋರ್ವ ಹೆಣ್ಣುಮಗಳ ವಿವಾಹಕ್ಕೆಂದು ೫೦೦೦ ರೂಪಾಯಿಗಳ ವರೆಗೆ ಮಾತ್ರ )

ಇದಕ್ಕೆ ಸ್ಪಷೀಕರಣವು ಅವಶ್ಯವಿದೆ.

i ) ಈ ಹಣವನ್ನು ಇನ್ಶೂರನ್ಸ ಪಾಲಿಸಿಯಲ್ಲಾಗಲೀ ಅಥವಾ ವಿಶ್ವಸ್ಥನಿಧಿಯಿಂದಾಗಲಿ ಅಥವಾ ಆಸ್ತಿವ್ಯವಸ್ಥೆಗಳಿಸುವಿಕೆಯಲ್ಲಾಗಲಿ, ( Settlement ) ತೊಡಗಿಸಿರಬೇಕು.

ii ) ಈ ಹಣವು ತಂದೆ ಅಥವಾ ತಾಯಿ ಅಥವಾ "ಸ್ವಾಭಾವಿಕ ಪಾಲಕರಿಂದ " ( Natural guardian ) ತೊಡಗಿಸಲ್ಪಟ್ಟಿರಬೇಕು.

"ಸ್ವಾಭಾವಿಕ ಪಾಲಕ"ರು ಯಾರು ಎಂಬುದನ್ನು ವಿವರವಾಗಿ ಸ್ಪಷ್ಟೀಕರಿಸಿಲ್ಲವಾದರೂ, ಮೃತನ ಹಾಗೂ ಹೆಣ್ಣುಮಗಳ ಮಧ್ಯ ಇರುವ ಸಂಬಂಧ ಅಥವಾ ಇನ್ನಿತರ ಅನೇಕ ಕಾರಣಗಳಿಂದ 'ಸ್ವಾಭಾವಿಕ ಪಾಲಕರು ಯಾರು' ಎಂಬುದು ನಿರ್ಧರಿಸಲ್ಪಡುತ್ತದೆ.

iii ) ಈ ರೀತಿಯಾಗಿರುವ ಹೆಣ್ಣುಮಕ್ಕಳು ಮೃತನ ಆಶ್ರಿತರಿರಬೇಕು-

ಅಂದರೆ ಅಂತಹ ಹಣವನ್ನು ಧಾರಣೆಯನ್ನು ಕಟ್ಟುವದಕ್ಕೆ ಮಾತ್ರ ಆಸ್ತಿಯಲ್ಲಿ ಕೂಡಿಸಿ, ಕರದಿಂದ ಮುಕ್ತಮಾಡಲಾಗುವದು.

೬) ಮೃತನ ಒಟ್ಟು ಆಸ್ತಿಯು ಎರಡು ಲಕ್ಷ ರೂಪಾಯಿಗಿಂತಲೂ ಕಡಿಮೆ ಇದ್ದಲ್ಲಿ, ಆ ಆಸ್ತಿಯಲ್ಲಿಯ ಬೇಸಾಯದ ಆಸ್ತಿಯ ಮೇಲೆ ಶೇಕಡಾ ೨೫ರಷ್ಟು ರಿಯಾಯತಿಯನ್ನು ತೋರಿಸಲಾಗುವದು. ಉದಾಹರಣೆಗಾಗಿ 'ಅ' ಎಂಬವನಲ್ಲಿ,

| | |
|---|---|
| ಸ್ಥಿರ (ಬೇಸಾಯದ ಆಸ್ತಿಯನ್ನು ಹೊರ್ತುಪಡಿಸಿ) ಆಸ್ತಿ | ರೂ. ೧,೦೦,೦೦೦ |
| ಬೇಸಾಯದ ಆಸ್ತಿ | ೫೦,೦೦೦ |
| ಕರಪಾತ್ರವಾಗುವ ಆಸ್ತಿ | ೧,೫೦,೦೦೦ |

ಈ ಒಂದು ಲಕ್ಷ ಮತ್ತು ೫೦ (ಐವತ್ತು) ಸಾವಿರ ರೂಪಾಯಿಗಳ ಆಸ್ತಿಯಮೇಲೆ ರೂ. ೩,೭೫೦ ಕರವು ಆಕರಿಸಲ್ಪಡುವದು. ಮೃತನ ಆಸ್ತಿಯು ಎರಡು ಲಕ್ಷಕ್ಕಿಂತಲೂ ಕಡಿಮೆ ಇದ್ದುದರಿಂದ ಅವನ ಒಕ್ಕಲುತನದ ಆಸ್ತಿಯಾದ ರೂ. ೫೦,೦೦೦ ದ ಮೇಲೆ ಬೀಳುವ ಆಸ್ತಿಕರದ ಶೇಕಡಾ ೨೫ ರಷ್ಟು ರಿಯಾಯತಿಯನ್ನು ತೋರಿಸಲಾಗುವದು ಅಂದರೆ—

| | | |
|---|---|---|
| ಕರ ಪಾತ್ರವಾಗುವ ಆಸ್ತಿ | ೧,೫೦,೦೦೦—೦—೦ | |
| ಒಟ್ಟು ಆಸ್ತಿಕರ | | ೩,೭೫೦—೦—೦ |
| ಬೇಸಾಯದ ಆಸ್ತಿ | ೫೦,೦೦೦—೦—೦ | |
| ಬೇಸಾಯದ ಆಸ್ತಿಯಮೇಲೆ ಸರಾಸರಿಯಾಗಿ ಬೀಳಬಹುದಾದ ಕರ ಅಂದರೆ — ೧,೫೦,೦೦೦ ರೂ. ೩೭೫೦ ರೂ. ಕರವು ಬೀಳಬಹುದಾದರೆ ೫೦, ೦೦೦ ರೂ. | ೧೨೫೦—೦—೦ | |
| ರೂ. ೧೨೫೦ ರ ಮೇಲೆ ಶೇಕಡಾ ೨೫ ರಂತೆ ರಿಯಾಯತಿ. | | ೩,೧೨—೮—೦ |
| ರಿಯಾಯತಿಯನ್ನು ಕಳೆದುಕೊಡಬೇಕಾದ ಒಟ್ಟುಕರ | | ೩,೪೩೭-೮-೦ |

ಈ ಬಗೆಯು ರಿಯಾಯತಿಯಲ್ಲಿ ಎರಡು ಸಂಗತಿಗಳನ್ನು ಲಕ್ಷ್ಯ ದಲ್ಲಿಡಬೇಕು.

i ) ಮೃತನ ಒಟ್ಟು ಆಸ್ತಿಯು ಎರಡು ಲಕ್ಷಕ್ಕಿಂತಲೂ ಹೆಚ್ಚಾಗಿರಬಾರದು.

ii ) ರಿಯಾಯತಿಯು ಕೇವಲ ಒಕ್ಕಲುತನದ ಆಸ್ತಿಯ ಮೇಲೆ ಅನ್ವಯಿಸುವದಲ್ಲದೆ, ಒಕ್ಕಲುತನದ ಆಸ್ತಿಗಳಮೇಲೆ ಸರಾಸರಿ ಬೀಳುವ ಕರದಲ್ಲಿ ಶೇಕಡಾ ೫೫ ರಷ್ಟು ಕಳೆಯಲಾಗುವದು.

## ೩. ತಾತ್ಕಾಲಿಕ ಮರಣಗಳು

ಸಾಮಾನ್ಯವಾಗಿ ಒಂದು ರಾಷ್ಟ್ರದಲ್ಲಿಯ ಒಟ್ಟು ಆಸ್ತಿಗಳು, ಕೆಲವು ನಿಯಮಕ್ಕೊಳಪಟ್ಟು, ಮೇಲಿಂದಮೇಲೆ ಬದಲಾವಣೆಯಾಗುತ್ತಿರುವದಿಲ್ಲ. ಆದರೆ ಆಸ್ತಿಯು ಕೈಗಳಿಂದ ಕೈಗೆ ಹಸ್ತಾಂತರವಾಗುತ್ತಲೇ ಹೋಗುವದು. ಆಸ್ತಿಯು ಮರಣಾನಂತರ ಹಸ್ತಾಂತರವಾದಾಗೊಮ್ಮೆ ಕರಕ್ಕೆ ಪಾತ್ರವಾಗುವದು. ಒಂದೇ ಆಸ್ತಿಯು ಕೆಲವು ವರುಷಗಳಲ್ಲಿಯೇ ಅನೇಕಸಲ ಕರಕ್ಕೆ ಪಾತ್ರವಾಗಬಹುದು. ಆದ್ದರಿಂದ ಐದುವರುಷಗಳ ಒಳಗಾಗಿ ಹಸ್ತಾಂತರವಾದಾಗ ಕಾಯದೆಯು ಸ್ವಲ್ಪ ರಿಯಾಯತಿಯನ್ನು ತೋರಿಸಬೇಕಾಗುತ್ತದೆ.

ಒಂದು ಕುಟುಂಬದಲ್ಲಿ, ಒಬ್ಬನ ತರುವಾಯ ಶೀಘ್ರದಲ್ಲಿಯೇ ಇನ್ನೊಬ್ಬನು ಮಡಿದರೆ, ಆಸ್ತಿ ಕರ ಕಾಯದೆ, ೩೦ನೇ ಕಲಮಿನನ್ವಯ ಈ ಕೆಳಗಿನಂತೆ ರಿಯಾಯತಿಯನ್ನು ತೋರಿಸಬೇಕಾಗುವದು.

೧) ಮೊದಲನೆಯ ಮರಣವು ಸಂಭವಿಸಿದ ಮೂರು ತಿಂಗಳೊಳಗಾಗಿಯೇ ಇನ್ನೊಂದು ಮರಣವು ಸಂಭವಿಸಿದರೆ.... ಕರವಿಲ್ಲ.

೨) ಮೊದಲನೆಯ ಮರಣವು ಸಂಭವಿಸಿದ ಒಂದು ವರುಷದೊಳಗಾಗಿಯೇ ಇನ್ನೊಂದು ಮರಣವು ಸಂಭವಿಸಿದರೆ.... ಶೇಕಡ ೫೦ರಷ್ಟು ರಿಯಾಯತಿ.

೩) ಮೊದಲನೆಯ ಮರಣವು ಸಂಭವಿಸಿದ ಒಂದು ವರುಷದ ನಂತರ ಆದರೆ ಎರಡು ವರುಷಗಳ ಒಳಗೆ ಇನ್ನೊಂದು ಮರಣವು ಸಂಭವಿಸಿದರೆ.... ಶೇಕಡ ೪೦ರಷ್ಟು ರಿಯಾಯತಿ.

೪) ಮೊದಲನೆಯ ಮರಣವು ಸಂಭವಿಸಿದ ಎರಡು ವರುಷಗಳ ನಂತರ ಆದರೆ ಮೂರು ವರುಷಗಳಲ್ಲಿ ಇನ್ನೊಂದು ಮರಣವು ಸಂಭವಿಸಿದರೆ.... ಶೇಕಡಾ ೩೦ರಷ್ಟು

೫) ಮೊದಲನೆಯ ಮರಣವು ಸಂಭವಿಸಿದ ಮೂರು ವರುಷಗಳನಂತರ ಆದರೆ ನಾಲ್ಕು ವರುಷಗಳಲ್ಲಿ ಇನ್ನೊಂದು ಮರಣವು ಸಂಭವಿಸಿದರೆ.... ಶೇಕಡಾ ೨೦ರಷ್ಟು.

೬) ಮೊದಲನೆಯ ಮರಣವು ಸಂಭವಿಸಿದ ನಾಲ್ಕು ವರುಷಗಳ ನಂತರ ಆದರೆ ಐದು ವರುಷಗಳ ಒಳಗಾಗಿಯೇ ಇನ್ನೊಂದು ಮರಣವು ಸಂಭವಿಸಿದರೆ ಶೇಕಡ ೧೦ರಷ್ಟು ರಿಯಾಯತಿ.

ಉದಾಹರಣೆಗಾಗಿ 'ಅ' ಎಂಬವನು ೧,೨೦,೦೦೦ ರೂಪಾಯಿಗಳ ಆಸ್ತಿಯನ್ನು ಬಿಟ್ಟು ಮರಣ ಹೊಂದುತ್ತಾನೆ. ಅವನ ವಾರಸಾದಾರನಾದ 'ಬ' ನು ಆಸ್ತಿಕರವನ್ನು ಆ ಆಸ್ತಿಗಳ ಮೇಲೆ ಕೊಟ್ಟು, 'ಅ' ನು ತೀರಿಕೊಂಡ ಒಂದು ವರ್ಷಗಳೊಳಗಾಗಿಯೇ ಮರಣ ಹೊಂದುತ್ತಾನೆ. 'ಬ' ನ ಆಸ್ತಿಯ ಮೇಲೆ ಆಕರಿಸಬಹುದಾದ ಕರದಲ್ಲಿ ಶೇಕಡ ೫೦ ರಷ್ಟು ಕಡಿಮೆ ಮಾಡಲಾಗುವದು.

ಈ ತಾತ್ಕಾಲಿಕ ಮರಣಗಳು ಸಂಭವಿಸಿದಲ್ಲಿ ಕೆಳಗಿನ ಅಂಶಗಳು ಗಮನಿಸಲ್ಪಡಬೇಕು.

# ಪ್ರಕರಣ ೬

## ೧) ಆಸ್ತಿಯ ಬೆಲೆ ಕಟ್ಟೋಣ

ಮೃತನು ಆಸ್ತಿಯನ್ನು ಕೊಳ್ಳುವಾಗ ಯಾವದೇ ಬೆಲೆಗೆ ಆಸ್ತಿಯನ್ನು ಕೊಂಡಿರಲಿ, ಆ ಬೆಲೆಯನ್ನು ಆಸ್ತಿಕರ ಕಾನೂನು ಮಾನ್ಯ ಮಾಡದೆ, ಮೃತನ ಮರಣದ ದಿನದಂದು ಪೇಟೆಯಲ್ಲಿ ಪ್ರಚಲಿತವಿರುವ ಬೆಲೆಯನ್ನೇ ಗಣಿಸುವದು. ಉದಾಹರಣೆಗಾಗಿ, ಮೃತನು ೧೮ ಸಾವಿರ ರೂಪಾಯಿಗಳನ್ನು ಕೊಟ್ಟು, ಮಶನರಿ ಸಾಮಾನುಗಳನ್ನು ಖರೀದಿ ಮಾಡಿದ್ದರೆ ಮತ್ತು ಮೃತನ ಮರಣದಂದು ಆ ಮಶನರಿ ಸಾಮಾನುಗಳ ಬೆಲೆಯು ೧೩,೦೦೦ ರೂಪಾಯಿಗಳಿದ್ದರೆ ಆ ಆಸ್ತಿಯು ಬೆಲೆಯು ೧೩ ಸಾವಿರ ರೂಪಾಯಿಗಳೆಂದೇ ಗ್ರಹಿಸಲಾಗುವದು.

ಮೃತನ ಮರಣದಂದು ಪೇಟೆಯಲ್ಲಿ ಪ್ರಚಲಿತವಿರುವ ಬೆಲೆಯನ್ನೇ ಆಸ್ತಿಯ ಬೆಲೆಯನ್ನಾಗಿ ಹಿಡಿಯಲಾಗುವದು. ಕೆಳಗೆ ಕಾಣಿಸಿದ ಆಸ್ತಿಗಳ ಹೆಚ್ಚುಕಡಿಮೆ ಇದೇ ತತ್ವದಮೇಲೆ, ಬೆಲೆ ಕಟ್ಟಲಾಗುವದು.

೧) ನಗದು ಹಣ— ನೋಟುಗಳು ಇತ್ಯಾದಿ.

(ಅ) ಭಾರತೀಯ ಹಣ - ಹಣದ ಮುಖಬೆಲೆಯು ಆಸ್ತಿಯ ಬೆಲೆಯಾಗುವದು.

(ಬ) ಪರದೇಶದ ಹಣ ( Foreign Currency ) ಮೃತನ ದಿನದಂದು, ಪರದೇಶೀ ಹಣಕ್ಕೆ ಭಾರತದ ವಿನಿಮಯ ಹಣ.

(ಕ) ಹುಂಡಿಗಳು— ಮೃತನ ದಿನದಂದು ಮುಖ್ಯ ಬೆಲೆ.

೨) ಬ್ಯಾಂಕಿನಲ್ಲಿ ಇಟ್ಟ ಹಣ :- ಬ್ಯಾಂಕ ರಿಕನ್ಸಿಲೇಶನ್ ಸ್ಟೇಟಮೆಂಟಿನನ್ವಯ ( Bank Reconciliation Statement ) ಬ್ಯಾಂಕಿನಲ್ಲಿದ್ದ ಹಣದ ಬೆಲೆ ( ಮೃತನ ದಿನದಂದು )

೩) ಇನ್ಸೂರನ್ಸ ಹಣ :- ಮೃತನು ಇನ್ಸೂರನ್ಸ ಇಳಿಸಿದ್ದರೆ, ಮೃತನಿಗೆ ಸಲ್ಲಬೇಕಾದ ಇನ್ಸೂರನ್ಸಿನ ಒಟ್ಟುಹಣ. ( ಬೋನಸ್ಸ ಸಹಿತವಾಗಿ )

೪) ಭಾಗೀದಾರಿಕೆಯಲ್ಲಿ (Partnership) ಯ ಹಿಸೆ- ಮೃತನು ಭಾಗಿದಾರಿಕೆಯಲ್ಲಿ ಪಾಲುಗಾರನಾಗಿದ್ದರೆ, ಭಾಗೀದಾರಿಕೆಯ ಅಂದಾಜ ಪತ್ರ ಹಾಗೂ ಭಾಗೀದಾರಿಕೆಯ ಕಾಗದ ಪತ್ರದ ಮೂಲಕ, ಭಾಗಿದಾರನ ಹಿಸೆಯ ಬೆಲೆಯನ್ನು ಕಟ್ಟಲಾಗುವದು.

೫) ಮೃತನಿಗೆ ಬರತಕ್ಕ ಸಾಲಗಳು :- ಮೃತನಿಗೆ ಬರತಕ್ಕ ಒಟ್ಟು ಸಾಲದ ಬೆಲೆ- ಸಾಲಗಳು ಮುಳಗುವ ಸಂಭವವಿದ್ದರೆ ( Bad Debts ) ಅವುಗಳನ್ನು ಒಟ್ಟು ಸಾಲದ ಬೆಲೆಯಲ್ಲಿ ಕಳೆಯಗುವದು.

೬) ಕಂಪನಿಯಲ್ಲಿದ್ದ ಶೇರುಗಳು :-

(ಅ) ಸ್ಟಾಕ ಎಕ್ಸಚೇಂಜದಲ್ಲಿಯ ಶೇರುಗಳು :-

ಮೃತನು ಲಿಮಿಟೆಡ್ ಕಂಪನಿಯ ಶೇರುಗಳನ್ನು ಕೊಂಡಿದ್ದರೆ ಮತ್ತು ಆ ಶೇರುಗಳು ಸ್ಟಾಕ ಎಕ್ಸಚೇಂಜ (Stock Exchange) ದಿಂದ ಮಾರಲ್ಪಡುತ್ತಿದ್ದರೆ, ಮೃತನ ಮರಣದ ದಿನದಂದು ಎಕ್ಸಚೇಂಜ ಪೇಟೆಯಲ್ಲಿ ಆ ಶೇರುಗಳ ಬೆಲೆಯನ್ನು ಗಣಿಸಲಾಗುವದು. ಆ ದಿನ ಎಕ್ಸಚೇಂಜ ಪೇಟೆಯಲ್ಲಿ ಎರಡು ಬೆಲೆಗಳು ನಮೂದಿಸಲ್ಪಟ್ಟಿದ್ದರೆ ಅತಿ ಕಡಿಮೆ ಬೆಲೆ ಮತ್ತು ಎರಡೂ ಬೆಲೆಗಳ ಅಂತರದ ಒಂದು

ನಾಲ್ಕಾಂಶ ಭಾಗವನ್ನು ಕೂಡಿಸಿ, ಶೇರುಗಳ ಒಟ್ಟು ಬೆಲೆಯನ್ನು ತೆಗೆಯಲಾಗುವದು.

ಉದಾಹರಣೆ:- ಮೃತನು ಒಂದು ಕಂಪನಿಯ ಶೇಕಡಾ ೭೫ ಡಿಫರ್ಡ ಶೇರುಗಳನ್ನು ಬಿಟ್ಟು ಹೋಗಿದ್ದಾನೆ. ಅವನ ಮರಣದಂದು ಎಕ್ಸಚೇಂಜ ಪೇಟೆಯಲ್ಲಿ ೧೨೪೬ ರೂಪಾಯಿಗಳು ಮತ್ತು ೧೨೩೮ ರೂಪಾಯಿಗಳು ಈ ಮಧ್ಯೆ ಆ ಶೇರಿನ ಬೆಲೆಯಿದ್ದರೆ.

| | |
|---|---|
| ಶೇರಿನ ಕಡಿಮೆ ಬೆಲೆ | ೧೨೩೮—೦—೦ |
| ಕಡಿಮೆ ಹಾಗೂ ಹೆಚ್ಚಿನ ಬೆಲೆಯಲ್ಲಿಯ ಅಂತರದ ಒಂದು ನಾಲ್ಕಾಂಶ ಭಾಗ (೧೨೪೬-೧೨೩೮ = ೮ ÷ ೪ = ೨) | ೨—೦—೦ |
| | ೧೨೪೦—೦—೦ |

ಒಂದು ವೇಳೆ, ಮೃತನ ಮರಣದಂದು ಎಕ್ಸಚೇಂಜ ಪೇಟೆಯಲ್ಲಿ ಭಾನುವಾರ ಅಥವಾ ರಜಾದಿನವಿದ್ದ ಮೂಲಕ ಬೆಲೆಗಳು ದೊರೆಯದಿದ್ದರೆ, ಆದರ ಮರುದಿನದ ಧಾರಣೆಗಳನ್ನು ಹಿಡಿಯಲಾಗುವದು.

ಬ) ಸ್ಟಾಕ ಎಕ್ಸಚೇಂಜದಲ್ಲಿರದ ಶೇರುಗಳು :-

ಮೃತನ ದಿನದಂದು ಶೇರಿನ ಬೆಲೆಯ ಬಗ್ಗೆ ಕಂಪನಿಯ ಸೆಕ್ರೆಟರಿಯಿಂದ ಅಥವಾ ಅಧಿಕೃತ ಎಜಂಟನಿಂದ ಪಡೆದ ಸರ್ಟಿಫಿಕೇಟುಗಳ ಆಧಾರದ ಮೇಲೆ ಬೆಲೆಯನ್ನು ಕಟ್ಟಲಾಗುವದು.

೭) ಚಿಕ್ಕ ಪುಟ್ಟ ಆಸ್ತಿಗಳು :—

ಮನೆಯಲ್ಲಿರುವ ಚಿಕ್ಕಪುಟ್ಟ ಆಸ್ತಿಗಳು. ಕಟ್ಟಿಗೆಯ ಸಾಮಾನುಗಳು ಹಾಗೂ ಇನ್ನಿತರ ಗ್ರಹೋಪಯೋಗಿ ವಸ್ತುಗಳನ್ನು ಪೇಟೆಯ ಧಾರಣೆಯ ಮೇಲೆಯೇ ಬೆಲೆ ಕಟ್ಟಲಾಗುವದು.

ಆ ) ಮೃತನ ಆಸ್ಥಿಯ ಬೆಲೆ ಕಟ್ಟೋಣ :—

ಮೃತನ ಆಸ್ಥಿ ಇದ್ದರೆ, ಅದೂ ಕೂಡ ಕರಕ್ಕೆ ಪಾತ್ರವಾಗುವ ದೆಂದು ಮೊದಲೇ ವಿವರಿಸಲಾಗಿದೆ. ಅಂದರೆ 'ಅ' ಎಂಬವನು ತನ್ನ ಮೃತ್ಯುಪತ್ರದಲ್ಲಿ ತನ್ನ ಆಸ್ತಿಯನ್ನು 'ಬ' ನಿಗೆ ಕೊಟ್ಟು 'ಬ' ನ ಮರಣದ ನಂತರ, ಆ ಆಸ್ತಿಯು 'ಕ'ನಿಗೆ ಸಲ್ಲಬೇಕೆಂದು ವಿವರಿಸಿ ದ್ದರೆ, 'ಅ'ನು ತೀರಿಕೊಂಡನಂತರ

i) 'ಬ' ನಿಗೆ ಆಸ್ತಿಯಿದೆ.

ii) 'ಕ' ನಿಗೆ ಆಸ್ತಿಯಿಲ್ಲ ('ಬ' ನ ಜೀವಮಾನದವರೆಗೆ) ಆಸ್ಥಿ ಇದೆ. ಇಂತಹ ಆಸ್ಥಿಯ ಬೆಲೆಯನ್ನು ಕಟ್ಟಿ ಅದನ್ನು ಕರಕ್ಕೆ ಗುರಿ ಮಾಡಲಾಗುವದು. ಯಾವ ಆಸ್ತಿಯಲ್ಲಿ ಮೃತನ ಆಸ್ಥಿ ಇದೆಯೋ, ಆ ಆಸ್ತಿಯ ಪೇಟೆಯ ಬೆಲೆಯು, ಮೃತನ ಆಸ್ಥಿಯ ಬೆಲೆಯಾಗುವದು. ಮೇಲೆ ವಿವರಿಸಿದ ಉದಾಹರಣೆಯಲ್ಲಿ 'ಅ' ನಿಂದ 'ಬ' ನಿಗೆ ಬಂದ ಆಸ್ತಿಯ ಬೆಲೆ 'ಕ' ನು ಮರಣ ಹೊಂದಿದ ದಿನದಂದು ೭೫,೦೦೦ ರೂ. ಗಳಿಸಿದ್ದರೆ, 'ಕ' ಆಸ್ಥಿಯ ಬೆಲೆ ೭೫,೦೦೦ ರೂ. ಗ್ರಹಿಸಲಾಗುವದು.

ಇಲ್ಲಿ ಒಂದು ಮಹತ್ವದ ಅಂಶವನ್ನು ನಾವು ಗಮನಿಸಬೇಕಾ ಗಿದೆ. ಮೃತನ ಮರಣದನಂತರ ಅವನ ವಾರಸಾದಾರನು ಅವನ ಆಸ್ಥಿಯ ಮೇಲೆ ಕರವನ್ನು,

i) ಮೃತನ ನಂತರ ಕೊಡಬೇಕಾಗುವ ಉಳಿದ ಆಸ್ತಿಕರಗ ಳೊಂದಿಗೆ ಈ ಆಸ್ಥಿಯ ಮೇಲಿರುವ ಕರವನ್ನು ಕೊಡಬಹುದು.

ii) ಅಥವಾ ಮೃತನ ಮರಣಾನಂತರ ಉಳಿದ ಆಸ್ತಿಗಳ ಮೇಲಷ್ಟೇ ಕರವನ್ನು ಕೊಟ್ಟು, ಆ ಆಸ್ಥಿಯು ಆಸ್ತಿಯಾಗಿ ಪರಿವರ್ತನೆ ಹೊಂದುವವರೆಗೂ ತಡೆದು, ಪರಿವರ್ತನೆ ಹೊಂದಿದಂದು ಕರವನ್ನು ಕೊಡಬಹುದು.

ಉದಾಹರಣೆಗಾಗಿ, 'ಅ'ನ ೫೦,೦೦೦ ರೂಪಾಯಿಗಳ ಆಸ್ತಿಯ ಮೇಲೆ 'ಬ'ನ ಆಸ್ಥೆ ಇದೆ. ಅಂದರೆ 'ಅ' ನು ಮರಣ ಹೊಂದಿದ ನಂತರ ಆ ಆಸ್ತಿಯು 'ಬ'ನಿಗೆ ಸಲ್ಲುವದು. ಆದರೆ 'ಅ'ನು ಮರಣ ಹೊಂದುವ ಪೂರ್ವದಲ್ಲಿಯೇ 'ಬ'ನು ಮರಣ ಹೊಂದಿದರೆ, 'ಬ'ನ ಈ ಇಸ್ಥೆಯುಮೇಲೆ, 'ಬ' ನ ವಾರಸಾದಾರರು

i) 'ಬ'ನ್ನು ಮರಣ ಹೊಂದಿದಂದು ಕರವನ್ನು ಕೊಡಬಹುದು.

ii) ಅಥವಾ 'ಬ' ನ ಆಸ್ಥೆಯು ಆಸ್ತಿಯಾಗಿ ಪರಿವರ್ತನೆ ಹೊಂದುವವರೆಗೆ ತಡೆದು, ಪರಿವರ್ತನೆ ಹೊಂದಿದನಂತರ 'ಬ' ನ ಆಸ್ಥೆಯು ಕರವನ್ನು ಕೊಡಬಹುದು. ಅಂದರೆ 'ಅ' ನು ಮರಣ ಹೊಂದಿದ ನಂತರ 'ಬ' ಆಸ್ಥೆಯು, ಆಸ್ತಿಯಾಗಿ ಪರಿವರ್ತನೆ ಹೊಂದುವದು.

ಆದರೆ 'ಬ' ನ ವಾರಸಾದಾರರು ಎರಡನೆಯ ಮಾರ್ಗವನ್ನು ಅನುಕರಿಸಿದರೆ ಅಂದರೆ 'ಬ' ನ ಆಸ್ಥೆಯ ಮೇಲಿನ ಕರವನ್ನು, ಆಸ್ತಿಯಾಗಿ ಪರಿವರ್ತನೆ ಹೊಂದಿದ ನಂತರ ಕರ ಕೊಡುವದನ್ನು ನಿಶ್ಚಯಿಸಿದರೆ– ಆಸ್ಥೆಯ ಬೆಲೆಯನ್ನು 'ಅ' ನ ಮರಣದಂದು, ಪೇಟೆಯಲ್ಲಿದ್ದ ಬೆಲೆಯನ್ನು ಗೃಹಿಸಲಾಗುವದೇ ಹೊರತು 'ಬ' ನ ಮರಣದ ಮುಂಡೆ ಇದ್ದ ಪೇಟೆಯ ಬೆಲೆಯನ್ನು ಲೆಕ್ಕಕ್ಕೆ ತೆಗೆದುಕೊಳ್ಳಲಾಗುವದಿಲ್ಲ. ಇದನ್ನು ಸ್ಪಷ್ಟೀಕರಿಸಲು ಮೇಲಿನ ಉದಾಹರಣೆಯನ್ನೇ ತೆಗೆದು ಕೊಳ್ಳೋಣ. 'ಬ' ನಿಗೆ,

| | |
|---|---|
| ಅಸ್ಥಿರ ಆಸ್ತಿ | ೧,೦೦,೦೦೦ |
| ಸ್ಥಿರ ಆಸ್ತಿ | ೨,೦೦,೦೦೦ |
| 'ಅ' ನ ಆಸ್ತಿಯ ಮೇಲಿನ ಆಸ್ಥೆ | ೫೦,೦೦೦ |
| | ೩,೫೦,೦೦೦ |

ಹೀಗೆ ಒಟ್ಟು ೩,೫೦,೦೦೦ ರೂಪಾಯಿಗಳ ಆಸ್ತಿ ಇದೆ. 'ಬ'ನ ಮರಣದ ನಂತರ, ಆವನ ವಾರಸದಾರರು ಆಸ್ಥೆಯನ್ನು ಒಟ್ಟು ಗೂಡಿಸಿ ಒಟ್ಟು ೩,೫೦,೦೦೦ ರೂಪಾಯಿಗಳಮೇಲೆ ಕರವನ್ನು ಕೊಡ ಬಹುದು. ಅಥವಾ 'ಬ' ನ ಮರಣದನಂತರ ಕೇವಲ ೩,೦೦೦,೦೦ ರೂ. ಕರವನ್ನು ಕೊಟ್ಟು 'ಅ'ನು ಮರಣ ಹೊಂದುವ ವರೆಗೆ ತಡೆದು, 'ಅ'ನು ಮರಣ ಹೊಂದಿದ ನಂತರ ( ಅಂದರೆ ಆಸ್ಥೆಯು ಆಸ್ತಿಯಾಗಿ ಪರಿವರ್ತನೆ ಹೊಂದುವ ವರೆಗೆ) ಆ ಆಸ್ಥೆಯಮೇಲೆ ಕರವನ್ನು ಕೊಡ ಬಹುದು. ಆದರೆ 'ಅ'ನು ಮರಣ ಹೊಂದಿದ ದಿನದಂದು ' ಬ ' ನ ಆಸ್ಥೆ ಇದ್ದ ಆಸ್ತಿಯ ಬೆಲೆಯು ರೂ. ೫೦,೦೦೦ ದಿಂದ ರೂ. ೮೦,೦೦೦ ವರೆಗೆ ಏರಿದ್ದರೆ, 'ಬ' ನ ವಾರಸದಾರರು ೮೦,೦೦೦ ರೂ. ಮೇಲೆ ಕರವನ್ನು ಕೊಡಬೇಕಾಗುವದು.

೨. ಹಿಂದೂ ಅವಿಭಕ್ತ ಕುಟುಂಬದ ಆಸ್ತಿ—

ಆಸ್ತಿಕರವು ಎಲ್ಲ ಧರ್ಮದವರಿಗೂ, ಘಟನೆಯಂತೆ ಸಮಾನ್ಯ ವಾಗಿ ಅನ್ವಯಿಸುವದಾದರೂ, ಪರಂಪರಾಗತ ಕಾನೂನನ್ನನುಸರಿಸಿ ಹಿಂದೂ ಅವಿಭಕ್ತ ಕುಟುಂಬದ ಬಗೆಗೆ ವಿಶೇಷ ಸವಲತ್ತುಗಳನ್ನು ನೀಡಲಾಗಿದೆ. ಆಸ್ತಿಕರವು ಮೃತನ ಒಟ್ಟು ಆಸ್ತಿಯನ್ನು ಗಣನೆಗೆ ತೆಗೆದುಕೊಳ್ಳುವದೇ ವಿನಹ ಮೃತನ ತರುವಾಯ ಆತನ ವಾರಸದಾ ರರು ಹಂಚಿಕೊಳ್ಳುವ ಆಸ್ತಿಯನ್ನಲ್ಲವೆಂದು ಈ ಹಿಂದೆಯೇ ನಮೂ ದಿಸಲಾಗಿದೆ. ಆದರೆ ಹಿಂದು ಅವಿಭಕ್ತ ಕುಟುಂಬದ ಒಟ್ಟು ಆಸ್ತಿ ಯನ್ನು ಕರಕ್ಕೆ ಗುರಿಮಾಡದೆ, ಮೃತನ ಪಾಲಿಗೆ ಬರಬಹುದಾದ ಪಾಲಿನಮೇಲೆ ಕರವನ್ನು ಹಾಕಲಾಗುವದು. ಉದಾಹರಣೆಗಾಗಿ, ಅ, ಬ, ಕ, ಮತ್ತು ಡ ಎಂಬ ಬಂಧುಗಳು ಅವಿಭಕ್ತ ಹಿಂದೂ ಕುಟುಂಬದ ಸದಸ್ಯರಾಗಿದ್ದಾರೆ. ಕುಟುಂಬದ ಒಟ್ಟು ಆಸ್ತಿಯು

೪ ಲಕ್ಷ ರೂಪಾಯಿಗಳಿವೆ. 'ಕ' ನು ಮೃತಪಟ್ಟರೆ 'ಕ'ನ ಪಾಲಿಗೆ ಬರಬಹುದಾದ ಒಂದು ಲಕ್ಷ ರೂಪಾಯಿ ಆಸ್ತಿಯಮೇಲೆ ಕರವನ್ನು ಹಾಕಲಾಗುವದು.

ಹಿಂದೂ ಅವಿಭಕ್ತ ಕುಟುಂಬವು ಮಿತಕ್ಷರಾ ಪದ್ಧತಿಯಂತೆ ನಡೆಯುತ್ತಿದ್ದಾಗ ಅಥವಾ ಮರುಮಕ್ಕಟಾಯಮ್ ಪದ್ಧತಿಯಂತೆ ನಡೆಯುತ್ತಿದ್ದಾಗ ಅಥವಾ ಅಳಿಯಸಂತಾನ ಪದ್ಧತಿಯಂತೆ 'ಕುಟುಂಬ' ಅಥವಾ 'ತವರು' ನಡೆಯುತ್ತಿದ್ದಾಗ, ಕುಟುಂಬದ ಸದಸ್ಯನು ತೀರಿಕೊಂಡರೆ, ಆಂದು ಕುಟುಂಬವು ವಿಭಜಿಸಲ್ಪಟ್ಟಿತೆಂದು ಗ್ರಹಿಸಿ ಮೃತನ ಪಾಲನ್ನು ಬೆಲೆಕಟ್ಟಲಾಗುವದು. ಆ ಪಾಲಿನ ಮೇಲೆ ಆಸ್ತಿ ಕರವನ್ನು ವಸೂಲಮಾಡಲಾಗುವದು. ಹಿಂದು ಏಕತ್ರ ಕುಟುಂಬದ ಆಕರಣೆ ಮಾಡುವಾಗ, ಮೊದಲಿಗೆ ಕುಟುಂಬದ ಎಲ್ಲ ಆಸ್ತಿಯನ್ನು ಮೇಲೆ ಹೇಳಿದ ರೀತಿಯಂತೆ ಬೆಲೆ ಕಟ್ಟಿ, ಮೃತನ ಪಾಲಿನಮೇಲೆ ಮಾತ್ರ ಕರವನ್ನು ಹೇರಲಾಗುವದು.

# ಪ್ರಕರಣ ೭

## ೧. ಆಸ್ತಿಕರದ ಅಧಿಕಾರಿಗಳು

ಆಸ್ತಿಕರದ ಆಡಳಿತೆಯನ್ನು ಉತ್ಪನ್ನಕರದ ಶಾಖೆಯವರಿಗೆ ವಹಿಸಿಕೊಡಲಾಗಿದೆ. ಆಸ್ತಿಕರ ಕಾನೂನಿನ ಕಲಮು ೪ರಲ್ಲಿ ಆಸ್ತಿಕರದ ಅಧಿಕಾರಿಗಳ ಬಗ್ಗೆ ಚರ್ಚಿಸಲಾಗಿದ್ದು ಈ ಕೆಳಗಿನವರು ಆಸ್ತಿಕರದ ಅಧಿಕಾರಿಗಳಾಗುವರು.

i) ಕೇಂದ್ರ ಕಂದಾಯ ಸಮಿತಿ ಅಥವಾ ಸೆಂಟ್ರಲ್ ಬೋರ್ಡ ಆಫ್ ರೆವಿನ್ಯೂ.

ii) ಆಸ್ತಿಕರದ ಕಂಟ್ರೋಲರರು (ಅಥವಾ ನಿಯಂತ್ರಿಕರು)

iii) ಬೆಲೆಕಟ್ಟುವವರು (Valuers).

ಎಲ್ಲ ಆಸ್ತಿಕರದ ಕಂಟ್ರೋಲರರು ಸೆಂಟ್ರಲ ಬೋರ್ಡ ಆಫ್ ರೆವಿನ್ಯೂದ ಆಧೀನದಲ್ಲಿದ್ದು, ಬೋರ್ಡು ನಿಯಮಾವಳಿಗಳನ್ನು ತಯಾರಿಸಲು ಬದ್ಧವಾಗಿದ್ದ ಕಂಟ್ರೋಲ್ಡ ಕಂಪನಿಗಳ ಬಗೆಗೂ, ತೀವ ಮರಣಗಳ ಬಗೆಗೂ ಹಾಗು ಇನ್ನಿತರ ಅನೇಕ ಕಲಮುಗಳನ್ವಯ ನಿಯಮಾವಳಿಗಳನ್ನು ಬೋರ್ಡು ತಯಾರಿಸುವದು. ಕೇಂದ್ರ ಸರಕಾರದವರು ತಾವು ಇಚ್ಛಿಸಿದಷ್ಟು ನಿಯಂತ್ರಣಾಧಿಕಾರಿಗಳನ್ನು ನಿಯಮಿಸಬಹುದಲ್ಲದೆ, ಈ ಕಂಟ್ರೋಲರರು ಬೋರ್ಡಿನ ಅಪ್ಪಣೆಯನ್ವಯ ಆಯಾ ವಿಭಾಗಗಳಲ್ಲಿ ಕೆಲಸಮಾಡುವರು. ಈ ಕಾಯದೆಯು ಪಾಸಾದ ೧೩ ತಿಂಗಳೊಳಗಾಗಿ ಕೇಂದ್ರ ಸರಕಾರವು 'ಬೆಲೆಕಟ್ಟುವವರನ್ನು' ( Valuers ), ನಿಯಮಿಸುವದಲ್ಲದೆ, ಕಾಲಕಾಲಕ್ಕೆ ಸಾಕಷ್ಟು ಅರ್ಹತೆ ಪಡೆದ ಬೆಲೆ ಕಟ್ಟುವವರನ್ನು ನಿಯಮಿಸುವದು.

## ಆಸ್ತಿಕರದ ಅಧಿಕಾರಿ ವರ್ಗ ಮತ್ತು ಅದರ ಕ್ಷೇತ್ರ—

| ಇನ್‌ಕಂಟ್ಯಾಕ್ಸ ಅಧಿಕಾರಿ ವರ್ಗ | ಆಸ್ತಿಕರದ ಅಧಿಕಾರಿ ವರ್ಗ | | ಅಧಿಕಾರ ಕ್ಷೇತ್ರ |
|---|---|---|---|
| ಕಮಿಶನರ ಆಫ್ ಇನ್‌ಕಂಟ್ಯಾಕ್ಸ | ಕಂಟ್ರೋಲರ | ೧೦ ಲಕ್ಷಕ್ಕಿಂತಲೂ ಹೆಚ್ಚಿನ ಆಸ್ತಿ | 'ಇನ್‌ಕಂಟ್ಯಾಕ್ಸ ಕಮಿಶನರ' ಎಂದು ಯಾವ ಕ್ಷೇತ್ರಕ್ಕೆ ಅವರ ಅಧಿಕಾರವು ಅನ್ವಯಿಸುವದೋ, ಆ ಎಲ್ಲ ಕ್ಷೇತ್ರ. |
| ಇನಸ್ಪೆಕ್ಟಿಂಗ ಅಸಿಸ್ಟಂಟ ಕಮಿಶನರ ಆಫ್ ಇನ್‌ಕಂಟ್ಯಾಕ್ಸ | ಡೆಪ್ಯೂಟ ಕಂಟ್ರೋಲರ | ೫ ಲಕ್ಷಕ್ಕಿಂತಲೂ ಮೇಲ್ಪಟ್ಟ ಹಾಗೂ ೧೦ ಲಕ್ಷದ ಒಳಗಿನ ಆಸ್ತಿಗಳು | 'ಇನಸ್ಪೆಕ್ಟಿಂಗ ಆಸಿಸ್ಟಂಟ ಕಮಿಶನರ ಆಫ್ ಇನ್‌ಕಂಟ್ಯಾಕ್ಸ' ಎಂದು ಯಾವ ಕ್ಷೇತ್ರಕ್ಕೆ ಅವರ ಅಧಿಕಾರವು ಅನ್ವಯಿಸುವದೋ, ಆ ಎಲ್ಲ ಕ್ಷೇತ್ರ. |

| | | | |
|---|---|---|---|
| ಇನ್‌ಕಂಟ್ಯಾಕ್ಸ ಆಫೀಸರ ಕ್ಲಾಸ ೧ | ಆಸಿಸ್ಟಂಟ ಕಂಟ್ರೋಲರ | ೫ ಲಕ್ಷಕ್ಕಿಂತಲೂ ಒಳಗಿನ ಆಸ್ತಿ | 'ಇನ್‌ಕಂಟ್ಯಾಕ್ಸ ಆಫೀಸರ' ಎಂದು ಯಾವ ಕ್ಷೇತ್ರಕ್ಕೆ ಅವರ ಅಧಿಕಾರವು ಅನ್ವಯಿಸುವದೋ, ಆ ಎಲ್ಲ ಕ್ಷೇತ್ರ. ಒಂದು ವೇಳೆ ಮೃತನು 'ಇನ್‌ಕಮ್ ಟ್ಯಾಕ್ಸ ಆಫೀಸರ ಕ್ಲಾಸ ೨' ಇವರ ಕ್ಷೇತ್ರದಲ್ಲಿದ್ದು, ಆಸ್ತಿಯು ೧॥ ಲಕ್ಷ ವನ್ನು ಮೀರಿದ್ದಲ್ಲಿ ಆ ಇನ್‌ಕಂಟ್ಯಾಕ್ಸ ಆಫೀಸರ ಕ್ಲಾಸ ೨ ಇವರಿಂದ ಇನಕಂ ಟ್ಯಾಕ್ಸ ಆಫೀಸರ ಕ್ಲಾಸ ೧ ಇವರಿಗೆ ಕರಾಕಣಿಯ ಅಧಿಕಾರವು ಹಸ್ತಾಂತರ ಹೊಂದುವದು. |
| ಇನ್‌ಕಂಟ್ಯಾಕ್ಸ ಆಫೀಸರ ಕ್ಲಾಸ ೨ | ಆಸಿಸ್ಟಂಟ ಕಂಟ್ರೋಲರ | ೧॥ ಲಕ್ಷಕ್ಕಿಂತಲೂ ಒಳಗಿನ ಆಸ್ತಿ | 'ಇನ್‌ಕಂ ಟ್ಯಾಕ್ಸ ಆಪೀಸರ' ಎಂದು ಯಾವ ಕ್ಷೇತ್ರಕ್ಕೆ ಅವರ ಅಧಿಕಾರವು ಅನ್ವಯಿಸುವದೋ, ಆ ಎಲ್ಲ ಕ್ಷೇತ್ರ. |

ಸೆಂಟ್ರಲ್ ಬೋರ್ಡ ಆಫ್ ರೆವನ್ಯೂ

|

ಕಂಟ್ರೋಲರ ಆಫ್ ಎಸ್ಟೇಟ ಡ್ಯೂಟಿ.

|

ಡೆಪ್ಯೂಟಿ ಕಂಟ್ರೋಲರ ಆಫ್ ಎಸ್ಟೇಟ ಡ್ಯೂಟಿ.

|

ಅಸಿಸ್ಟಂಟ ಕಂಟ್ರೋಲರ ಆಫ್ ಎಸ್ಟೇಟ ಡ್ಯೂಟಿ.

ಈ ರೀತಿಯಾಗಿ ಆಸ್ತಿಕರದ ಅಧಿಕಾರಿ ವರ್ಗವಿದೆ. ಡಿಶಂಬರ ೧೯೫೩, ನಾಲ್ಕನೆಯ ತಾರೀಖಿನ ದಿನ ಬೋರ್ಡ ಆಫ್ ರೆವೆನ್ಯೂ ಹೊರಡಿಸಿದ ಪರಿಪತ್ರದಲ್ಲಿ, ಇನಂಟ್ಯಾಕ್ಸ ಅಧಿಕಾರಿ ವರ್ಗವನ್ನೇ ಆಸ್ತಿಕರದ ಅಧಿಕಾರಿ ವರ್ಗವನ್ನಾಗಿ ನಿಯಮಿಸಿದೆ. ಅದನ್ನು ಈ ಹಿಂದಿನಪುಟದಲ್ಲಿದ್ದಂತೆ ವಿವರಿಸಬಹುದು.

## ೨) ಕರಾಕರಣೆಯ ಪದ್ಧತಿ

ಕರಕ್ಕೆ ಪಾತ್ರವಾಗುವ ಪ್ರತಿಯೋರ್ವನು ಅಂದರೆ ಮೃತನ ಆಸ್ತಿಯನ್ನು ಆತನ ತರುವಾಯ ಉಪಭೋಗ ಮಾಡಿಕೊಳ್ಳುವವನು, ಮೃತನು ಮರಣಹೊಂದಿದ ಆರು ತಿಂಗಳೊಳಗಾಗಿಯೇ ಕಂಟ್ರೋಲರನಿಗೆ, ಮೃತನ ಎಲ್ಲ ಆಸ್ತಿಯ ವಿವರವನ್ನು ಕೊಟ್ಟು ಲೆಕ್ಕಪತ್ರವನ್ನು ಒಪ್ಪಿಸಬೇಕು.

ಕರಕ್ಕೆ ಪಾತ್ರವಾಗುವ ವ್ಯಕ್ತಿಯು ಮೃತನ ಕೆಲವೊಂದು ಆಸ್ತಿಯ ಬೆಲೆಯನ್ನು ಕಟ್ಟಲು ಅಸಮರ್ಥನಾದಾಗ- ತನ್ನ ಲೆಕ್ಕಪತ್ರದಲ್ಲಿ, ಆ ಆಸ್ತಿಯ ವಿವರವನ್ನು ಕಂಟ್ರೋಲರನಿಗೆ ಒಪ್ಪಿಸ

ಬೇಕು. ಯಾವ ಮೃತನ ಆಸ್ತಿಗೆ ಒಬ್ಬರಿಗಿಂತಲೂ ಹೆಚ್ಚು ಜನರು ಭಾಗಿಗಳಿದ್ದರೆ ಮೃತನ ತರುವಾಯ ಪ್ರತಿಯೋರ್ವನೂ ಕರಕ್ಕೆ ಪಾತ್ರನಾಗುವ ವ್ಯಕ್ತಿಯಾಗುವನು.

ಕರದ ಗಣನೆಯ ಪ್ರಾರಂಭವು, ಕಲಮು ೫೩ ಅಥವಾ ೫೭ ರಂತೆ; ಕರಕ್ಕೆ ಪಾತ್ರರಾಗುವ ಜನರು ( Accountable persons ) ಕಂಟ್ರೋಲರನಿಗೆ ಲೆಕ್ಕ ಪತ್ರವನ್ನು ಒಪ್ಪಿಸಿದನಂತರ ಪ್ರಾರಂಭವಾಗುವದು

ಕಲಮು ೫೩ ಅಥವಾ ೫೭ ರಂತೆ, ಕರಕ್ಕೆ ಪಾತ್ರವಾಗುವವರು ಒಂದು ವೇಳೆ ಮೃತನ ಆಸ್ತಿಯ ಲೆಕ್ಕಪತ್ರವನ್ನು ಕಂಟ್ರೋಲರನಿಗೆ ಒಪ್ಪಿಸದಿದ್ದರೆ, ಕಲಮ ೬೧ ಉಪಕಲಮು (೨) ರನ್ವಯ ಕಂಟ್ರೋಲರನು ತಾನೇ ಆಸ್ತಿಯ ಯಾದಿಯನ್ನು ತಯಾರಿಸಿ, ಅದರ ಮೇಲೆ ಕರವನ್ನು ಕಟ್ಟಿ ಆ ಕರವನ್ನು ಕರಕ್ಕೆ ಪಾತ್ರರಾಗುವವರಿಂದ ವಸೂಲ ಮಾಡಬಹುದು.

ಮೃತನು ಮರಣಹೊಂದಿ ಹನ್ನೆರಡು ವರುಷಗಳು ಸಂದಿದ ನಂತರ, ಮೃತನ ಆಸ್ತಿಯಮೇಲೆ ಕರಾಕರಣೆಯನ್ನು ಮಾಡಲಾಗುವದಿಲ್ಲ. ಉದಾಹರಣೆಗಾಗಿ 'ಅ' ಎಂಬುವವನು ೧, ಜನೇವರಿ, ೧೯೫೪ ರಂದು ತೀರಿಕೊಂಡನು. ಅವನ ಎರಡು ಲಕ್ಷ ರೂಪಾಯಿಯ ಆಸ್ತಿ ಕರಕ್ಕೆ ಪಾತ್ರವಾಗಿತ್ತಾದರೂ, ಅದು ಕರವನ್ನು ತಪ್ಪಿಸಿಗೊಂಡಿತ್ತು. ೩೧ ಡಿಶಂಬರ, ೧೯೬೫ ರವರೆಗೆ ಆ ಆಸ್ತಿಯನ್ನು ಯಾವಾಗಲಾದರೂ ಕರಕ್ಕೆ ಗುರಿಮಾಡಬಹುದು.

## ೩) ಕರವನ್ನು ತುಂಬುವ ಪದ್ಧತಿ

ಸೆಂಟ್ರಲ ಬೋರ್ಡ ಆಫ್ ರೆವೆನ್ಯೂ, ಕರವನ್ನು ತುಂಬುವ ಪದ್ಧತಿಯ ಬಗ್ಗೆ ಕೆಳಗಿನಂತೆ ಸೂಚಿಸಿದೆ.

i ) ಶೆಡ್ಯೂಲ ಬ್ಯಾಂಕದಮೇಲೆ ಚಕ್ಕನ್ನು ಬರೆದು, ಕಂಟ್ರೋಲರನ ಆಫೀಸಿನಲ್ಲಿ, ಕರದ ಹಣವನ್ನು ತುಂಬಬಹುದು.

ii) ಶೆಡ್ಯೂಲ ಬ್ಯಾಂಕದ ಡ್ರಾಫ್ಟನ್ನು, ಕಂಟ್ರೋಲರನ ಆಫೀಸಿನಲ್ಲಿ ತುಂಬಬಹುದು.

iii) ಕರದ ಹಣವನ್ನು, ಕೇಂದ್ರ ಸರಕಾರದ ಹೆಸರಿನಲ್ಲಿ ಯಾವದೇ ಸರಕಾರಿ ಟ್ರೇಝುರಿ, ಸಬ್ ಟ್ರೇಝುರಿ, ಅಥವಾ ರಿಝುರ್ವ ಬ್ಯಾಂಕ ಆಫ್ ಇಂಡಿಯಾದ ಯಾವದೇ 'ಶಾಖೆ' ಅಥವಾ ಇಂಪಿರಿಯಲ್ ಬ್ಯಾಂಕ ಆಫ್ ಇಂಡಿಯಾದ ಯಾವದೇ ಶಾಖೆ ಅಥವಾ ಎಜೆನ್ಸಿಯಲ್ಲಿ ತುಂಬಬಹುದು.

iv ) ಶೆಡ್ಯೂಲ ಬ್ಯಾಂಕದ ಚೆಕ್ಕಿನಿಂದ ಹಣವನ್ನು ಕೊಡುವವರು, ರಿಝುರ್ವ ಬ್ಯಾಂಕ ಇಫ್ ಇಂಡಿಯಾದ ಹೆಸರಿನಿಂದ ಚೆಕ್ಕನ್ನು ಬರೆಯಬೇಕು.

v ) ಈ ರೀತಿಯಾಗಿ ಚೆಕ್ಕಿನಿಂದ ಹಣಕೊಟ್ಟರೆ, ಚೆಕ್ಕು ಬ್ಯಾಂಕಿನಲ್ಲಿ ಚಲಾವಣೆಯಾಗಿ, ಹಣವು ಜಮಾ ಆಗುವವರೆಗೆ ಕರವನ್ನು ತುಂಬಿಲ್ಲವೆಂದೇ ಭಾವಿಸಲಾಗುವದು.

## ೪ ) ಆಸ್ತಿಕರ ಕಾಯದೆಯನ್ವಯ ದಂಡಗಳು-

## ( Penalties )

ಅ ) ಕಲಮು ೫೩ ರನ್ವಯ ಕರಕ್ಕೆ ಪಾತ್ರವಾಗುವವನು ( Accountable Person ) ವ್ಯಕ್ತನು ಗತಿಸಿದ ಆರು ತಿಂಗಳಿಗೆ ಅಥವಾ ಕಂಟ್ರೋಲರನು ನಮೂದಿಸಿದ ಅವಧಿಯಲ್ಲಿ, ಯೋಗ್ಯ ಕಾರಣಗಳಿಲ್ಲದೆ, ಕಂಟ್ರೋಲರನಿಗೆ ಲೆಕ್ಕ ಪತ್ರವನ್ನು ಒಪ್ಪಿಸದಿದ್ದರೆ, ಒಂದು ಸಾವಿರ ರೂಪಾಯಿಗಳ ದಂಡಕ್ಕೆ ಅಥವಾ ಕೊಡ

ದೇ ಇರುವ ಆಸ್ತಿಕರದ ಎರಡುಪಟ್ಟು ಹಣದ ದಂಡಕ್ಕೆ ಪಾತ್ರನಾಗುವನು.

ಬ) ಕಲಮು ೫೫ ರನ್ವಯ ಕರಪಾತ್ರವಾಗುವವನು ಮೃತನು ಗತಿಸಿದ ಆರು ತಿಂಗಳೊಳಗಾಗಿ, ಕಂಟ್ರೋಲರನು ಇಚ್ಛಿಸಿದ ಆಸ್ತಿಯ ವಿವರಗಳನ್ನು ಸರಿಯಾದ ಕಾರಣಗಳಿಲ್ಲದೆ ಒಪ್ಪಿಸದಿದ್ದರೆ, ಒಂದು ಸಾವಿರ ರೂಪಾಯಿಗಳ ದಂಡಕ್ಕೆ ಅಥವಾ ಕೊಡದೆ ಇರುವ ಆಸ್ತಿಕರದ ಎರಡರಷ್ಟು ರಕಮಿನ ದಂಡಕ್ಕೆ ಪಾತ್ರನಾಗುವನು

ಕರಪಾತ್ರನಾಗುವವನು "ಯೋಗ್ಯ ಕ ರಣಗಳನ್ನು" ಸಾದರಪಡಿಸಿದರೆ ಮೇಲಿನ ದಂಡಗಳಿಂದ ಮುಕ್ತನಾಗುವನು. ಅಲ್ಲದೆ ಕೆಲವು ಪ್ರಕರಣಗಳಲ್ಲಿ ಕಂಟ್ರೋಲರನು ದಂಡದ ಹಣವನ್ನು ಕಡಿಮೆ ಮಾಡಬಹುದು.

ಕ) ಕರಪಾತ್ರವಾಗುವವನು ತಾನು ಕೊಡಬೇಕಾದ ಅವಧಿಯಲ್ಲಿ ತಾನು ಸಲ್ಲಿಸಬೇಕಾದ ಕರವನ್ನು ತುಂಬದಿದ್ದರೆ, ಒಂದು ಸಾವಿರ ರೂಪಾಯಗಳ ದಂಡಕ್ಕೆ ಅಥವಾ ಆಸ್ತಿಕರದ ಎರಡರಷ್ಟು ಹಣದ ದಂಡಕ್ಕೆ ಪಾತ್ರನಾಗ ವನು ಕೆಲವು ಸಂದರ್ಭದಲ್ಲಿ ಕಂಟ್ರೋಲರನು ದಂಡದ ಮೊಬಲಗನ್ನು ಕಡಿಮೆಮಾಡಬಹುದು.

ಡ) ಕಲಮು ೭೨ ರನ್ವಯು, ಎಲ್ಲ ಲೆಕ್ಕಪತ್ರಗಳು, ಸರ್ಟಿಫಿಕೇಟುಗಳು, ಅಫ್‌ಡಿವಿಟ್ಸ (Affidvits) ಮುಂತಾದ ಎಲ್ಲ ಫಾರ್ಮುಗಳು ಹಾಗೂ ಕಾಗದಪತ್ರಗಳು, ಕೇಂದ್ರ ಕಂದಾಯ ಸಮಿತಿ ಸೂಚಿಸುವಂತೆ ಎಲ್ಲ ವಿವರಗಳನ್ನೊಳಗೊಂಡಿರಬೇಕಲ್ಲದೆ, ಅದು ಇಚ್ಛಿಸಿದರೆ ಎರಡು ಪ್ರತಿಗಳನ್ನು (Duplicates) ಕಂಟ್ರೋಲರನಿಗೆ ಒಪ್ಪಿಸಬೇಕು. ಮತ್ತು ಇಂತಹ ಕಾಗದ ಪತ್ರಗಳಲ್ಲಿ ನಮೂದಿಸಿದ ಸಂಗತಿಗಳು ಸರಿಯಾಗಿರಬೇಕು. ಇದಕ್ಕೆ

ತಪ್ಪಿದಲ್ಲಿ, ಒಂದು ಸಾವಿರ ರೂಪಾಯಿಗಳ ದಂಡ ಅಥವಾ ಕೊಡದೇ ಇರುವ ಆಸ್ತಿಕರದ ಎರಡುಪಟ್ಟು ಮೊಬಲಗಿನ ದಂಡಕ್ಕೆ ಪಾತ್ರನಾಗುವನು.

## ೫) ಸರ್ಟಿಫಿಕೇಟುಗಳು

ಎಲ್ಲ ಅಸ್ಥಿರ ಆಸ್ತಿಯಮೇಲೆ ಸರಕಾರದ ಹಕ್ಕು ಮೊಟ್ಟ ಮೊದಲನೆಯದಾಗಿದ್ದು, ಎಲ್ಲಕ್ಕೂ ಮೊದಲು ಆ ಆಸ್ತಿಗಳ ಮೇಲೆ ಕರವು ಅನ್ವಯಿಸುವದು. ಆ ಹಣವನ್ನು ಕೊಡುವವರೆಗೆ, ಸ್ಥಿರ ಆಸ್ತಿಯ 'ವರ್ಗಾಯಿನೋಣ'ವು ಕ್ರಮಬದ್ಧವಾಗಲಾರದು. ಆದ್ದರಿಂದ ಕರ ಕೊಡದೆ ಇದ್ದ ಆಸ್ತಿಯನ್ನು ಕೊಂಡುಕೊಂಡವನು, ಆಸ್ತಿಯ ಕ್ರಮಬದ್ಧ ಉಪಭೋಗಕ್ಕೆ ಪಾತ್ರನಾಗಲಾರನು. ಆಸ್ತಿಯ ಮೇಲೆ ಕರವನ್ನು ತುಂಬಿದೆಯೋ ಹೇಗೊ ಅಥವಾ ತುಂಬುವದಿದೆಯೋ ಹೇಗೆ ಅಥವಾ ಕರದಿಂದ ಮುಕ್ತವಾಡಲ್ಪಟ್ಟಿದೆಯೋ ಹೇಗೆ ಎಂಬುದರ ಬಗ್ಗೆ, ಕಂಟ್ರೋಲರನು ಸರ್ಟಿಫಿಕೇಟುಗಳನ್ನು ಕೊಡುವನು. ಇಂತಹ ಸರ್ಟಿಫಿಕೇಟುಗಳನ್ನು ಪಡೆಯುವದಕ್ಕಾಗಿ ನಿರ್ದಿಷ್ಟ ಪಡಿಸಿದ ಫಾರ್ಮುಗಳಲ್ಲಿ, ಅರ್ಜಿಗಳನ್ನು ಮಾಡಬೇಕಾಗುವದು.

## ೬) ಅಪೀಲುಗಳು

ಕಂಟ್ರೋಲರನು ಮಾಡಿದ ಆಕರಣೆಯ ಮೇಲೆ ಕರಪಾತ್ರವಾಗುವವನು ಕಂದಾಯ ಸಮಿತಿ ಹಾಯಕೋರ್ಟಿಗೂ ಮತ್ತು ವರಿಷ್ಠ ನ್ಯಾಯಾಲ (ಸುಪ್ರೀಮ ಕೋರ್ಟಿಗೂ,) ಅಪೀಲನ್ನು ಮಾಡಬಹುದಾಗಿದೆ.

ಸೆಂಟ್ರಲ್ ಬೋರ್ಡಿಗೆ ಈ ಕೆಳಗೆ ವಿವರಿಸಿದ ವಿಷಯಗಳಬಗ್ಗೆ ಅಪೀಲನ್ನು ಮಾಡಬಹುದು

೧) ಕಂಟ್ರೋಲರನು ಆಸ್ತಿಯ ಬೆಲೆ ಕಟ್ಟಿದ್ದರ ವಿರುದ್ಧವಾಗಿ

೨) ಕಂಟ್ರೋಲರನು ಹೊರಡಿಸಿದ ಯಾವದೇ ಆಜ್ಞೆಯ ವಿರುದ್ಧವಾಗಿ.

೩) ಕಂಟ್ರೋಲರನು ಹೇರಿದ ದಂಡದ ವಿರುದ್ಧವಾಗಿ

೪) ಕರಪಾತ್ರತೆಯ ವಿರುದ್ಧವಾಗಿ ಇಂತಹ ಕರಾಕರಣೆಯ ವಿಷಯಕ್ಕೊಳಪಟ್ಟ ಯಾವದೇ ಆಜ್ಞೆಯ ವಿರುದ್ಧವಾಗಿ ಕರಪಾತ್ರನಾಗುವವನು ಸೆಂಟ್ರಲ್ ಬೋರ್ಡಿಗೆ ಅಪೀಲನ್ನು ಮಾಡಿಕೊಳ್ಳಬಹುದು. ಆಸ್ತಿಯ ಬೆಲೆ ಕಟ್ಟುವದರಲ್ಲಿದ್ದ ದೋಷಗಳ ವಿರುದ್ಧವಾಗಿ ಮಾಡಿದ ಅಪೀಲುಗಳನ್ನು ಹೊರ್ತುಪಡಿಸಿ ಉಳಿದ ಅಪೀಲುಗಳ ಬಗ್ಗೆ ಬೋರ್ಡು ಕೊನೆಯ ಆಜ್ಞೆಯನ್ನು ನೀಡಬಹುದು. ಬೆಲೆಕಟ್ಟೋಣದ ಬಗೆಗೆ ಬೋರ್ಡಿನ ಆಜ್ಞೆಯಿಂದ ಕರಪಾತ್ರನಾಗುವವನು ಸಮಾಧಾನ ಹೊಂದಿದ್ದರೆ ಕರಪಾತ್ರವಾಗುವವರ ಬಿನ್ನಹದ ಮೇರೆಗೆ ಬೆಲೆ ಕಟ್ಟುವ ಸಮಿತಿಗೆ, ಅಥವಾ ಮಧ್ಯಸ್ತಿಕೆ ಮಂಡಳಕ್ಕೆ ಆ ಅಪೀಲನ್ನು ಬೋರ್ಡು ಕಳುಹಿಸಿಕೊಡಬಹುದು. ಈ ಸಮಿತಿಯಲ್ಲಿ ಬೋರ್ಡಿನ ಪರವಾಗಿ ಒಬ್ಬ ಬೆಲೆ ಕಟ್ಟುವವನೂ, ಅರ್ಜದಾರನ ಪರವಾಗಿ ಒಬ್ಬ ಬೆಲೆಕಟ್ಟುವವನೂ ಇರುವರು. ಬೆಲೆಕಟ್ಟುವ ಪ್ರಶ್ನೆಯು ಈ ಸಮಿತಿಯಲ್ಲಿ ಇತ್ಯರ್ಥವಾಗದಿದ್ದರೆ ಸಮಿತಿಯ ಇಬ್ಬರೂ ಸದಸ್ಯರು ನಾಮಕರಣ ಮಾಡಿದ ಅಥವಾ ಹೀಗೆ ಮಾಡದಿದ್ದರೆ ಕೇಂದ್ರ ಸರಕಾರವು ನಾಮಕರಣ ಮಾಡಿದ ಮೂರನೆಯ ಬೆಲೆಕಟ್ಟುವವನಿಗೆ ಈ ಪ್ರಕರಣವನ್ನು ಒಪ್ಪಿಸಲಾಗುವದು. ಅವನ ನಿರ್ಣಯವೇ ಕೊನೆಯದು.

ಕಾಯದೆಗೆ ಸಂಬಂಧಪಟ್ಟ ಅಪೀಲುಗಳನ್ನು ಆಯಾ ಹಾಯಕೋರ್ಟಿಗೆ ಮಾಡಿಕೊಳ್ಳಬಹುದು. ಹಾಯ ಕೋರ್ಟಿನ ನಿರ್ಣಯದಿಂದ ಕರಪಾತ್ರನಾಗುವವನು ಸಮಾಧಾನಹೊಂದಿದ್ದರೆ ವರಿಷ್ಠ ನ್ಯಾಯಾಲಯ (ಸುಪ್ರೀಮ ಕೋರ್ಟಿಗೆ) ಅಪೀಲನ್ನು ಮಾಡಿಕೊಳ್ಳಬಹುದು. ಸುಪ್ರೀಮ ಕೋರ್ಟಿನ ನಿರ್ಣಯವೇ ಕೊನೆಯದು.

# ಕರಾಕರಣೆಯ ದರಗಳು

## ಭಾಗ ೧

### ಮಿತಕ್ಷರಾ, ಮರುಮಕ್ಕತ್ತಾಯಮ್ ಮತ್ತು ಅಳಿಯಸಂತಾನ ಪದ್ಧತಿಯಿಂದ ನಡೆಯುವ ಹಿಂದೂ ಅವಿಭಕ್ತ ಕುಟುಂಬದ ಆಸ್ತಿಗಳಿಗೆ-

| | ಆಸ್ತಿಯ ಬೆಲೆ | | ಕರ ಶೇಕಡಾ |
|---|---|---|---|
| ಮೊದಲಿನ | ೫೦,೦೦೦ | ರೂ ಗಳಿಗೆ | ಕರವು ಆಕರಿಸು |
| ಮುಂದಿನ | ೫೦,೦೦೦ | ,, | ೫% |
| ,, | ೫೦,೦೦೦ | ,, | ೭½ % |
| ,, | ೫೦,೦೦೦ | ,, | ೧೦ % |
| ,, | ೧,೦೦,೦೦೦ | ,, | ೧೨½ % |
| ,, | ೨,೦೦,೦೦೦ | ,, | ೧೫ % |
| ,, | ೫,೦೦,೦೦೦ | ,, | ೨೦ % |
| ,, | ೧೦,೦೦,೦೦೦ | ,, | ೨೫ % |
| ,, | ೧೦,೦೦,೦೦೦ | ,, | ೩೦ % |
| ,, | ೨೦,೦೦,೦೦೦ | ,, | ೩೫ % |
| ಆನಂತರ ಮುಂದಿನ ಬೆಲೆಯ ಆಸ್ತಿಗಳಿಗೆ | | | ೪೦ % |

## ಭಾಗ ೨

ಮಿತಾಕ್ಷರಾ, ಮರುಮಕಟ್ಟಾಯಮ್ ಮತ್ತು ಅಳಿಯ ಸಂತಾನ ಪದ್ಧತಿಯಿಂದ ನಡೆಯುವ ಕುಟುಂಬದ, ಹಿಂದೂ ಅವಿಭಕ್ತ ಕುಟುಂಬವನ್ನು ಹೊರತುಪಡಿಸಿ ಉಳಿದ ಆಸ್ತಿಗಳಿಗೆ–

| | ಆಸ್ತಿಯ ಬೆಲೆ | | ಕರ ಶೇಕಡಾ |
|---|---|---|---|
| ಮೊದಲಿನ | ೧,೦೦,೦೦೦ | ರೂ. ಬೆಲೆ ಆಸ್ತಿ | ಕರವು ಆಕರಿಸುವದಿಲ್ಲ |
| ಮುಂದಿನ | ೫೦,೦೦೦ | ,, | ೭½% |
| ,, | ೫೦,೦೦೦ | ,, | ೧೦% |
| ,, | ೧,೦೦,೦೦೦ | ,, | ೧೨½% |
| | ೨,೦೦,೦೦೦ | ,, | ೧೫% |
| | ೫,೦೦,೦೦೦ | ,, | ೨೦% |
| | ೧೦,೦೦,೦೦೦ | ,, | ೨೫% |
| | ೧೦,೦೦,೦೦೦ | ,, | ೩೦% |
| | ೨೦,೦೦,೦೦೦ | ,, | ೩೫% |
| ಅನಂತರ ಮುಂದಿನ ಬೆಲೆಯು ಆಸ್ತಿಗಳಿಗೆ | | | ೪೦% |



## ಭಾಗ ಮೂರು

ಯಾವ ಅಧಿಕೃತ ಕಂಪನಿಯು ಭಾರತದ ಹೊರಗೆ ಸ್ಥಾಪಿಸಲ್ಪಟ್ಟು ಭಾರತದಲ್ಲಿ ವ್ಯವಹಾರ ಮಾಡುತ್ತದೆಯೋ ಮತ್ತು ಇನಕಂ ಟ್ಯಾಕ್ಸ ಕಾಯದೆಯ (೧೯೨೨) ರನ್ವಯ, ಕಂಪನಿಯ ಪಾಲುದಾರನು ಕರಕ್ಕೆ ಪಾತ್ರನಾಗುವನೋ, ಅಂತಹ ಪಾಲುದಾರನು ತೀರಿಕೊಂಡರೆ, ಉಳಿದ ಅಧಿಕೃತ ಕಂಪನಿಯು ಮೇಲೆ ವಿವರಿಸಿದಂತಹ ಪಾಲುದಾರನು ತೀರಿಕೊಂಡ ಸುದ್ದಿ ತಿಳಿದನಂತರ ಮೂರು ತಿಂಗಳ ಒಳಗಾಗಿ, ಕಂಟ್ರೋಲರನಿಗೆ ಕಲಮು ೮೪ ರನ್ವಯ ಮೃತನು ಧಾರಣಮಾಡಿದ ಪಾಲುಗಳ ವಿವರಗಳನ್ನು ಕೊಡಬೇಕಾಗುವದು. ಅವು ಈ ಕೆಳಗಿನಂತೆ ಕರಕ್ಕೆ ಪಾತ್ರವಾಗುವವು.

೧) ಮೇಲಿನಂತೆ ಪಾಲುಗಳಬೆಲೆ ೫೦೦೦ ರೂ. ಕಡಿಮೆ ಇದ್ದರೆ ಕರವು ಆಕರಿಸುವದಿಲ್ಲ.

೨) ಮೇಲಿನಂತೆ ಪಾಲುಗಳ ಬೆಲೆ ೫೦೦೦ ಮೀರಿತ್ತೆಂದರೆ ೭½ %







ಸುಪ್ರೀಮು ಕೋರ್ಟ

ಹೈಕೋರ್ಟ

ಕಾಯಿದೆಗೆ ಸಂಬಂಧಪಟ್ಟ ಅಪೀಲುಗಳು

ಮಧ್ಯಸ್ಥಿಕೆ ಮಂಡಳ

ಮಾರಿಸುವ ಬೆಲೆ ಬೆಲೆ ಕಟ್ಟುವವರು

ಆಸ್ತಿ ಬೆಲೆಗೆ ಸಂಬಂಧಪಟ್ಟ ಅಪೀಲುಗಳು

**ಸೆಂಟ್ರಲ ಬೋರ್ಡ ಆಫ್ ರೆವೆನ್ಯೂ**

(ಕೇಂದ್ರ ಕಂದಾಯ ಸಮಿತಿ)

**ಕಂಟ್ರೋಲರ**

(ಇನ್‌ಕಂಟ್ಯಾಕ್ಸ ಕಮಿಶನರ)

ಬಂದರೆ ಅಪೀಲು

ಬಂದರೆ ಅಪೀಲು

ಡೆಪ್ಯೂಟಿ ಕಂಟ್ರೋಲರ ಇನಸ್ಪೆಕ್ಟಿಂಗ ಅಸಿಸ್ಟಂಟ ಇನ್ಕಂಟ್ಯಾಕ್ಸ ಕಮಿಶನರ)

ಅಸಿಸ್ಟಂಟ ಕಂಟ್ರೋಲರ (ಇನ್‌ಕಂಟ್ಯಾಕ್ಸ ಆಫೀಸರ) ಕ್ಲಾಸ ೨

ಅಸಿಸ್ಟಂಟ ಕಂಟ್ರೋಲರ (ಇನ್‌ಕಂಟ್ಯಾಕ್ಸ ಆಫೀಸರ) ಕ್ಲಾಸ ೧

ರೂ. ೧,೫೦,೦೦೦ ಒಳಗೆ

ರೂ. ೫,೦೦,೦೦೦ ಒಳಗೆ

೫ ರಿಂದ ೧೦ ಲಕ್ಷ ರೂ. ವರೆಗೆ

೧೦ ಲಕ್ಷ ರೂ. ಮೇಲ್ಪಟ್ಟು

**ಆಸ್ತಿಕರದ ಅಪೀಲುಗಳು ಹಾಗೂ ಅಧಿಕಾರಿ ವರ್ಗ**

ಸೂಚನೆ:

═══ ಅಪೀಲುಗಳು

▬▬▬ ಆಡಳಿತೆ ವರ್ಗ